# NITIMANJARI.

**( Part I. )**

BY

R. NARASIMHACHAR, M. A. M. R. A. S.

# ನೀತಿಮಂಜರಿ

( ಪ್ರಥಮಭಾಗಂ. )

ರಾ. ನರಸಿಂಹಾಚಾರ್ಯ ಎಂ. ಎ. ಎಂ. ಆರ್. ಎ. ಎಸ್.

ಇವರಿಂದ ಸಂಗ್ರಹಿತವಾಯಿತು.

ಬೆಂಗಳೂರು:

ಕ್ಯಾಕ್ಸ್ಟನ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.

೧೯೧೩.



[Price 12 As]

## NOTE TO THE THIRD EDITION.

---

The copies of the second edition having been exhausted, this edition has been brought out to meet the constant demand for the book. A few slight changes have been made in the text and the notes.

BANGALORE, 1—7—1913.

R. NARASIMHACHAR.

---

## ತೃತೀಯಮುದ್ರಣ.

### ಸೂಚನೆ.

---

ದ್ವಿತೀಯಮುದ್ರಣದ ಪ್ರತಿಗಳೆಲ್ಲಾ ಮುಗಿದುಹೋದುದರಿಂದ ಈ ಪುಸ್ತಕವನ್ನು ಜನರು ಅಪೇಕ್ಷಿಸುವುದರಿಂದಲೂ ಈ ಗ್ರಂಥವನ್ನು ಪುನಃ ಮುದ್ರಿಸಲಾಯಿತು. ಮೂಲದಲ್ಲಿಯೂ ಟಿಪ್ಪಣದಲ್ಲಿಯೂ ಎಲ್ಲಿಯೋ ಒಂದೆರಡುಕಡೆ ಮಾತ್ರ ಕೆಲವು ಮಾರುಪಾಡುಗಳು ಮಾಡಿವೆ.

ಬೆಂಗಳೂರು, 1—7—1913.

ರಾ. ನರಸಿಂಹಾಚಾರ್ಯ.

## NOTE TO THE SECOND EDITION.

The following are the changes introduced in this edition of Nitimanjari, Part I :—

1 The foot-notes of the former edition have been amplified and transferred to the end of the book. Some grammatical and philological notes have been added where they were deemed necessary.

2 The stanzas have been numbered consecutively from the beginning to the end. The following list gives the names of the Tamil works and the number of stanzas translated from each.—Nanneri 1—40, Múdurai 41—66, Vettrivèrkai and Nalvali 67—82, Nítinerivilakkam 83—131, Nítisáram 133—150, Nìtivenbâ 151—171, Náladiyár 172—325, other works 326—375.

3 The archaic letters *r* (ಱ) and *l* (ೞ) have been introduced in this edition. It is well-known that in Modern Kannada the letters *r* (ರ) and *l* (ಳ) are invariably substituted for the above letters. But, when either of each pair of the letters—*r*, *r* and *l*, *l*—takes the place of the other in a word, there is a change not only in the meaning of the word but also, in some degree, in the grammatical processes which it undergoes; and it is very desirable that students of the Kannada language should have some idea of this. I have, as far as possible, pointed out in the notes the changes which words undergo in consequence of the interchange of *r* and *r* and of *l* and *l*.

The letters *ṟ* and *ḻ* are now in use in most of the languages of the Dravidian group. But they had almost disappeared from the Kannada language when Messrs. Kittel and Rice came forward and rescued them from undeserved oblivion. These pioneers in the field of Kannada Literature have been helped by the editors of the Kavyamanjari in the work of familiarising the Kannadigas with these letters. As the importance of these letters is very great from a philological point of view, their revival cannot but be a source of gratification to all lovers of the Kannada language. I venture to think that it is desirable to preserve these letters in the poetical works of the language, though it may be considered neither desirable nor feasible at present to revive them in Kannada prose.

I take this opportunity of thanking the Mysore Text-book Committee for prescribing selections from this book for the Lower Secondary Examinations of 1898 and 1899, and the Madras University for prescribing this as one of the Text-books for the F. A. Examination of 1900

In the 2nd Part of Nitimanjari, I intend giving a metrical version in Kannada of portions of the most celebrated ethical work in Tamil—the Kuṟaḷ of Tiruvaḷḷuvar.

MYSORE,
*7th October* 1898.

R. NARASIMHACHAR

## NOTE TO THE FIRST EDITION.

Of all the Dravidian languages, Tamil is the richest in its store of ethical treatises which form the great code of morals of the Tamil-speaking people. Many of these works, especially those written by the poetess Avvai, of whom the Rev. H. Bower remarks, "She sang like Sappho; yet not of love, but of virtue," are "familiar as household words" among the Tamilians. Of *Kural*, the most celebrated ethical work in Tamil, the same scholar says that it is superior to the Institutes of Manu and is worthy of the divine Plato himself. This work has been translated into some of the European languages, and many soholars are of opinion that there is no treatise equal to it in any Indian language.

There are some moral treatises in Kannada also; but their number is not very large. Besides, many of them are not quite free from sectarian bias.

Knowing a little of both these languages, I thought I might render the Kannadigas a little service by giving them a free metrical translation in Kannada of portions of some of the Tamil works on morals. The works selected for translation in this Part are chiefly *Nanneri*, *Múdurai*, *Vettrivérkai*, *Nalvali*, *Nítinerivilakkam*, *Nítivenbá*, *Nítisáram* and *Náladiyár*. Here and there occur some verses which are my own. The verses are written in old

Kannada and all difficult words are explained in the foot-notes.

I earnestly hope that these verses will be read as widely by those for whom they are intended as their originals are in the Tamil country.

My thanks are due to the editor of the Karnataka Granthamala for publishing this work in parts in the issues of that magazine.

MYSORE,<br>*25th September* 1896 } R. NARASIMHACHAR.

---

# ದ್ವಿತೀಯಮುದ್ರಣ.

## ಪೀಠಿಕೆ.

---

ಅವ್ವೈಯಾರ್ ಮೊದಲಾದವರು ತಮಿಳಿನಲ್ಲಿ ಹಲವು ನೀತಿ ಗ್ರಂಥಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಕೆಲವನ್ನು ಪದ್ಯರೂಪವಾಗಿ ಕನ್ನಡಕ್ಕೆ ಭಾಷಾಂತರಮಾಡಿದ್ದೇನೆ. ನೀತಿಮಂಜರಿಯ ಈ ಭಾಗದಲ್ಲಿ ಭಾಷಾಂತರಮಾಡಿರುವ ಗ್ರಂಥಗಳ ಹೆಸರುಗಳೂ ಪದ್ಯಸಂಖ್ಯೆಯೂ ಕೆಳಗೆ ಕೊಟ್ಟಿವೆ :—

ನನ್ನೆಱಿ 1–40, ಮೂದುರೈ 41–66, ವೆತ್ತಿವೇರ್ಕೈ ಮತ್ತು ನಲ್ವೞಿ 67–82, ನೀತಿನೆಱಿವಿಳಕ್ಕಂ 83–131, ನೀತಿಸಾರಂ 132-150, ನೀತಿವೆಣ್ಬಾ 151-171, ನಾಲಡಿಯಾರ್, 172-325, ಇತರಗ್ರಂಥಗಳು ಮತ್ತು ಸ್ವಕೃತಪದ್ಯಗಳು 326–375.

ಈ ಗ್ರಂಥಗಳಲ್ಲಿ ಒಂದೆರಡನ್ನು ಮಾತ್ರ ಸಂಪೂರ್ಣವಾಗಿಯೂ, ಉಳಿದುವುಗಳಲ್ಲಿ ಕೆಲವು ಭಾಗಗಳನ್ನು ಮಾತ್ರ ಆರಿಸಿಕೊಂಡೂ, ಸಾಧ್ಯವಾದಮಟ್ಟಿಗೆ ಮೂಲವನ್ನು ಅನುಸರಿಸಿ ಭಾಷಾಂತರಮಾಡಿದ್ದೇನೆ.

ಈ ಗ್ರಂಥವು ಮೊದಲು ಕರ್ಣಾಟಕಗ್ರಂಥಮಾಲೆಯಲ್ಲಿ ಸ್ವಲ್ಪ ಸ್ವಲ್ಪವಾಗಿ ಅಚ್ಚಾಗುತ್ತ ಬಂದಿತು. ಇದರಲ್ಲಿ ಕೆಲವು ಭಾಗಗಳನ್ನು 1898 ನೆಯ ಮತ್ತು 1899 ನೆಯ ಮೈಸೂರು ಲೋವರ್ ಸೆಕಂಡರಿ ಪರೀಕ್ಷೆಗೆ ನಿಯಮಿಸಿದುದಕ್ಕಾಗಿ ಮೈಸೂರು ಪಠನೀಯ ಗ್ರಂಥನಿರ್ಣಯಕಸಭೆಯವರಿಗೂ (Text-book Committee), 1900 ನೆಯ ಎಫ್. ಎ. ಪರೀಕ್ಷೆಗೆ ಪಠನೀಯಗ್ರಂಥಗಳಲ್ಲಿ ಇದನ್ನೂ ಒಂದಾಗಿ ನಿಯಮಿಸಿದುದಕ್ಕಾಗಿ ಮದ್ರಾಸ್ ವಿಶ್ವವಿದ್ಯಾಲಯ ಸಂಘದವರಿಗೂ (University), ನಾನು ಬಹಳ ಕೃತಜ್ಞನಾಗಿದ್ದೇನೆ.

ಈ ಮುದ್ರಣದಲ್ಲಿ ಕೆಲವು ಮಾರುಪಾಡುಗಳು ಮಾಡಿವೆ. ಅವಾವುವೆಂದರೆ :—

1. ಪುಟಗಳ ಕೆಳಗೆ ಬರೆದಿದ್ದ ಟಿಪ್ಪಣವು ಹೆಚ್ಚಿಸಲ್ಪಟ್ಟು ಪುಸ್ತಕದ ಅಂತ್ಯಭಾಗದಲ್ಲಿ ಸೇರಿಸಿದೆ. ಆವಶ್ಯಕತೆ ತೋರಿದ ಕಡೆ ವ್ಯಾಕರಣಸಂಬಂಧವಾದ ಟಿಪ್ಪಣವೂ ತಕ್ಕಮಟ್ಟಿಗೆ ಬರೆದಿದೆ.

2. ಒಂದೊಂದು ಗ್ರಂಥದ ಪದ್ಯಗಳಿಗೂ ಬೇರೆ ಬೇರೆ ಸಂಖ್ಯೆಯನ್ನು ತಪ್ಪಿಸಿ ಮೊದಲಿಂದ ಕೊನೆಯವರೆಗ ಪದ್ಯಗಳನ್ನು ಕ್ರಮವಾಗಿ ಲೆಕ್ಕಮಾಡಿ ಆಯಾಗ್ರಂಥಗಳು ಮುಗಿದ ಕಡೆ ಒಂದು ಗೆರೆ ಹಾಕಿದೆ.

3. ಪದ್ಯಗಳಲ್ಲಿ ಱ, ೞ, ಎಂಬ ಹಳಗನ್ನಡದ ಅಕ್ಷರಗಳು ಉಪಯೋಗಿಸಿವೆ. ಇವಕ್ಕೆ ಪ್ರತಿಯಾಗಿ ಹೊಸಗನ್ನಡದಲ್ಲಿ ರ, ಳ, ಎಂಬ ಅಕ್ಷರಗಳನ್ನು ಬರೆವುದು ಎಲ್ಲರಿಗೂ ತಿಳಿದ ವಿಷಯವಾಗಿಯೇ ಇದೆ. ಆದರೆ ಈ ಎರಡುವಿಧವಾದ ರೇಫಳಕಾರಗಳಲ್ಲಿ ಒಂದಕ್ಕೆ ಪ್ರತಿಯಾಗಿ ಮತ್ತೊಂದಿದ್ದರೆ ಅನೇಕಪದಗಳಲ್ಲಿ ಅರ್ಥಭೇದವೂ ಸ್ವಲ್ಪಮಟ್ಟಿಗೆ ವ್ಯಾಕರಣಪ್ರಕ್ರಿಯಾಭೇದವೂ ಉಂಟಾಗುತ್ತವೆ. ಈ ವಿಷಯವು ಸ್ವಲ್ಪಮಟ್ಟಿಗಾದರೂ ವಾಚಕರಿಗೆ ತಿಳಿಯಬೇಕು ಎಂಬುದ್ದೇಶದಿಂದ ಱ ೞ ಕಾರಗಳನ್ನು ಈ ಗ್ರಂಥದಲ್ಲಿ ಉಪಯೋಗಿಸಿರುವುದಲ್ಲದೆ ಒಂದು ರೇಫಕ್ಕೆ ಪ್ರತಿಯಾಗಿ ಮತ್ತೊಂದೂ ಒಂದು ಳಕಾರಕ್ಕೆ ಪ್ರತಿಯಾಗಿ ಮತ್ತೊಂದೂ ಇದ್ದರೆ ಪದಗಳಲ್ಲಿ ಉಂಟಾಗುವ ಅರ್ಥಭೇದವನ್ನೂ ತಕ್ಕಮಟ್ಟಿಗೆ ಟಿಪ್ಪಣದಲ್ಲಿ ವ್ಯಕ್ತಪಡಿಸಿದ್ದೇನೆ.

ಱ, ೞ, ಎಂಬ ಅಕ್ಷರಗಳು ಪ್ರಾಯಿಕವಾಗಿ ಇತರದ್ರಾವಿಡಭಾಷೆಗಳಲ್ಲೆಲ್ಲಾ ವಾಡಿಕೆಯಲ್ಲಿವೆ. ಕನ್ನಡದಲ್ಲಿ ಮಾತ್ರ ಅವು ಅದೃಶ್ಯವಾಗಿ ಹೋಗಿದ್ದುವು. ಮಾ॥ ಕಿಟ್ಟೆಲ್, ಮಾ॥ ರೈಸ್, ಕಾವ್ಯಮಂಜರೀಸಂಪಾದಕರು, ಇವರುಗಳು ಅವನ್ನು ಪ್ರಚಾರಕ್ಕೆ ತರುತ್ತಿರುವುದು ಕರ್ಣಾಟಕಭಾಷಾಭಿಮಾನಿಗಳಿಗೆ ಸಂತೋಷವನ್ನು

ಉಂಟುಮಾಡದೆ ಇರಲಾರದು. ಈ ಅಕ್ಷರಗಳು ಶಬ್ದವ್ಯುತ್ಪತ್ತಿ ಶಾಸ್ತ್ರದ (Philology) ಜ್ಞಾನಕ್ಕೆ ಬಹಳಮಟ್ಟಿಗೆ ಸಹಕಾರಿಗಳಾಗಿವೆ. ತತ್ಕಾಲದಲ್ಲಿ ಇವನ್ನು ಕನ್ನಡಗದ್ಯಗ್ರಂಥಗಳಲ್ಲಿ ಪ್ರಚಾರಕ್ಕೆ ತರುವುದು ಅನಾವಶ್ಯಕವಾಗಿ ತೋರಿದರೂ ಪದ್ಯಗ್ರಂಥಗಳಲ್ಲಿ ಯಾದರೂ ಪ್ರಚಾರಕ್ಕೆ ತರುವುದು ಆದರಣೀಯವಾದ ವಿಷಯವೆಂದು ಭಾವಿಸುತ್ತೇನೆ.

ನೀತಿಮಂಜರಿಯ 2 ನೆಯ ಭಾಗದಲ್ಲಿ ತಿರುವಳ್ಳುವರಿಂದ ರಚಿತವಾದ ಕುಱಳೆಂಬ ಪ್ರಸಿದ್ಧವಾದ ನೀತಿಗ್ರಂಥದ ಕೆಲವು ಭಾಗಗಳನ್ನು ಕನ್ನಡಕ್ಕೆ ಪದ್ಯರೂಪವಾಗಿ ಪರಿವರ್ತನೆಮಾಡಬೇಕೆಂದಿದ್ದೇನೆ.

ಮೈಸೂರು.<br>
1898ನೆಯ ಅಕ್ಟೋಬರ್ 7. ರಾ. ನರಸಿಂಹಾಚಾರ್ಯ.

—※—

# ಪ್ರಥಮಮುದ್ರಣ.

## ಪೀಠಿಕೆ.

---

ತಮಿಳಿನಲ್ಲಿ ಅನೇಕನೀತಿಗ್ರಂಥಗಳಿರುವುದು ಪ್ರಾಯಿಕವಾಗಿ ಎಲ್ಲರಿಗೂ ತಿಳಿದಿರಬಹುದು. ಅಕ್ಷರಮಾಲೆಯನ್ನು ಕಲಿವುದು ಮೊದಲ್ಗೊಂಡು ಕ್ರಮೇಣ ಆ ಭಾಷೆಯಲ್ಲಿ ಪೂರ್ಣಜ್ಞಾನವನ್ನು ಸಂಪಾದಿಸುವವರೆಗೂ ನೀತಿಗ್ರಂಥಗಳನ್ನೇ ಓದಬಹುದು. ಇಷ್ಟು ನೀತಿಗ್ರಂಥಗಳು ಇನ್ನಾವ ದ್ರಾವಿಡಭಾಷೆಯಲ್ಲಿಯೂ ಇಲ್ಲ. ಇವುಗಳಲ್ಲಿ ಕೆಲವನ್ನು ಭಾಷಾಂತರಮಾಡಿದರೆ ಕನ್ನಡಿಗರಿಗೆ ಉಪಯೋಗವಾಗಬಹುದು ಎಂಬ ಅಭಿಪ್ರಾಯದಿಂದ ಈ ಪದ್ಯಗಳನ್ನು ಬರೆದಿದ್ದೇನೆ.

ಈ ಪದ್ಯಗಳು ವಾಚಕರಿಗೆ ಸ್ವಲ್ಪ ಕಷ್ಟವಾಗಿ ತೋರಬಹುದು. ಗದ್ಯಗ್ರಂಥವು ಹೇಗಿದ್ದರೂ ಇರಲಿ—ಪದ್ಯಗ್ರಂಥವು ಯಾವಾಗಲೂ ಲಕ್ಷಣಬದ್ಧವಾಗಿಯೇ ಇರಬೇಕು ಎಂಬ ಅಭಿಪ್ರಾಯದಿಂದಲೂ, ಸಾಧ್ಯವಾದಮಟ್ಟಿಗೆ ಹಳಗನ್ನಡದ ಪದಗಳೂ, ಶೈಲಿಯೂ, ವ್ಯಾಕರಣಮರ್ಯಾದೆಯೂ, ವಾಚಕರ ಕಿವಿಗೆ ಬೀಳುತ್ತಿರಬೇಕು ಎಂಬ ಉದ್ದೇಶದಿಂದಲೂ, ಈ ಗ್ರಂಥವನ್ನು ಪೂರ್ವಕವಿಗಳ ಮಾರ್ಗವನ್ನನುಸರಿಸಿ ಬರೆದಿದ್ದೇನೆ. ಗುಣೈಕಪಕ್ಷಪಾತಿಗಳು ಈ ಪದ್ಯಗಳನ್ನು ಆದರದಿಂದ ಸ್ವೀಕರಿಸುವರು ಎಂದು ನಂಬುತ್ತೇನೆ. ಕಷ್ಟವಾದ ಪದಗಳಿಗೆ ಮಾತ್ರ ಕೆಳಗೆ ಅರ್ಥವು ಕೊಟ್ಟಿದೆ.

ಮೈಸೂರು.<br>
1896 ನೆಯ ಸೆಪ್ಟೆಂಬರ್ 25.

ರಾ. ನರಸಿಂಹಾಚಾರ್ಯ.



# ಶುದ್ಧಿ ಪತ್ರ.

| ಪುಟ. | ಪಙ್ತಿ. | ಅಶುದ್ಧ. | ಶುದ್ಧ. |
|---|---|---|---|
| 5 | 16 | ಪೆಱತೊಂದೊಡೆ | ಪೆಱತೊಂದದೆ |
| 16 | 20 | ಸ್ತ್ರಯಿ | ಸ್ತ್ರೀಯಿ |
| 29 | 20 | ಬೀಱೆದಪುದೆ | ಬೀಱದಪುದೆ |
| 45 | 1 | ನುಡಿಯೋಳ್ | ನುಡಿಯೊಳ್ |
| 74 | 4 | ತಗಳ್ದು | ತಗುಳ್ದು |

## ಟಿಪ್ಪಣಿ.

| | | | |
|---|---|---|---|
| 12 | 1 | ಬಸಿಱೀ | ಬಸಿಱ್ಱೀ |
| ,, | 15 | ಸ್ತ್ರೀಯಿ | ಸ್ತ್ರೀಯಿ |
| 18 | 18 | ದಾಕ್ಷಿಣ್ಯಂ= | ದಾಕ್ಷಿಣ್ಯಂ— |
| 20 | 23 | ನವಜ | ವನಜ |
| 40 | 9 | ಆದರ | ಆದರೆ |

# ನೀತಿಮಂಜರಿ

ಮಂಗಳ ಶ್ಲೋಕಗಳು.

ಇಂಗಡಲ ಕುವರಿ ವಕ್ಷೋ |
ರಂಗದೊಳಸಮಾನಶೋಭೆಯಂ ಬೀಱೆ ತಟ ||
ತ್ಸಂಗದೆ ತೊಳಗುವ ಮುಗಿಲ ಬೆ |
ಡಂಗಂ ನಗುವಂಬುಜಾಕ್ಷನೀಗೆಮಗೊಳ್ಪಂ ||

ಸುರನಿಕರಮುಕುಟತಟಹಟ |
ದುರುತರಮಣಿವಿಸರರುಚಿರವಿಸ್ಫುರಕಿರಣೋ |
ತ್ಕರನೀರಾಜಿತಪದಸರ |
ಸಿರುಹಂ ಸಿರಿಯರಸನಾವಗಂ ಪೊರೆಗೆಮ್ಮಂ ||

ಪಿಂದೊರ್ಮೆ ಪೊಗೞಿದವರ್ಗಂ |
ಸಂದೀವರ್ ಬೇೞ್ಪ ಪುರುಳನೊಲವಿಂ ಸುಜನರ್ ||
ಎಂದುಂ ಪೊಗೞ್ದಪುದೆನುತುಂ |
ತಂದೀಗುಮೆ ಕೆಯ್ಯೊೞಲ್ದು ಬಾಯ್ಗಿನ್ನುಣಿಸಂ | 1

ಕಱೆ ಪೊರ್ದದ ಮನಮುಳ್ಳರ |
ಬಿಱುನುಡಿಯಿನಿದಕ್ಕುಮನ್ಯರಿನಿವಾತಿನಿದೇ ||
ಅಱಿದನ ಭಕ್ತನ ಕಲ್ಗಳೊ |
ಕಱೆಗೊರಲಂಗರಲ ಸರಲೊ ಮಾಡುಗುವೊಲವಂ || 2 ||

ಪಡೆವೊಡೆ ಜಡರಿಂ ಪುರುಳಂ |
ಪಡೆವುದವಂದಿರ ಸುಹೃತ್ಸಹಾಯತೆಯಿಂದಂ ||
ಪಡೆವೊಡೆ ಪಯದಿಂ ಪಯಮಂ |
ತಡೆಯದೆ ಕೆಳೆಗೊಳ್ವರದಱ ಕಱುವಂ ಚದುರರ್ || 3 ||

ಕುಡದರ ಪುರುಳದು ಪೆಱತಾ |
ದೊಡಮೆರೆವಗ್ಗೊರ್ಗಲ್ದು ಕುಡುವರರ್ಥಮೆ ಅಕ್ಕುಂ ||
ಕುಡಿವೊಡೆ ನೀರಂ ಕುಡದಾ |
ಕಡಲಿಂ ಮೊಗೆದಿಳೆಗೆ ನೀರನೆಱೆದಪುದು ಮುಗಿಲ್ || 4 ||

ಕೆಳೆ ಬಳೆದಪುದೇ ಮಾತ್ರಂ |
ಕೆಳೆಯರ್ ಕಡುವೞಿದಗಲ್ದು ಮುಗುಪ್ತ್ರೊದ್ದಸೆಯಲೊಡಂ ||
ಕಳಮದ ಕಣದಿಂ ತುಷಮಂ |
ಕಳೆದೊಡಗೂಡಿಸೆ ಬೞಿಕ್ಕೆ ಸಯ್ತಕ್ಕುಮೆ ಪೇೞ್ || 5 ||

ಇನಿಯುಳುಮಿನಸನುಂ ಮನವೊ |
ಲ್ದಿನಿಸುಂ ಮಾರ್ಕೊಳ್ಳದೆಸಪುದೊಳ್ಗಜ್ಜಗಳಂ ||
ಅನುಕೂಲತೆಯಿಂದಂ ಲೋ |
ಚನಮೆರಪುಂ ನೋಟ್ಪುವಲ್ತೆ ವಸ್ತುವನೊಂದಂ || 6 ||

ಎನಿತೊಳವು ಕಲೆಗಳನಿತುಂ ।
ಮನದೊಳ್ ನೆಲೆಗೊಂಡುವೆಂದು ಜಿತ್ತನೆ ಬೀಗು ॥
ತ್ರೈನಗಿದಿರಿನ್ನಿಲ್ಲೆನುತುಂ ।
ತೊನೆಯದಿರಬ್ಧಿಯುಮನಂದು ಕಿತ್ತಡಿ ಪೀರ್ದಂ ॥ 7 ॥

ಕಿಡಿಯಿಡುತಪರ್ವ್ವ ಕೋಪಮು
ನೆಡೆಗುದದುಪುಗಿಪ್ಪುದಿನಲ್ತೆ ಮಹನೀಯಗುಣಂ ॥
ಗುಪುಗುಡಿಸಿ ಪರಿವ ಪೊನಲಂ ।
ತಡೆವುದು ಪಿರಿದಣೆಯನಟಿದು ಪರಿಯಿಪುದರಿದೇ ॥ 8 ॥

ವೀರಾಶ್ರಯವೊಂದಿದರು ।
ಪ್ರಾರಾತಿಯುಮಂ ಪೊಡರ್ಪುಗುಂದದೆ ನೋಟ್ಪರ್ ॥
ಮಾರಾರಾತಿಯ ಜಡೆಯೊಳ್ ।
ವಾರಾಜಿಪ ಪಾವು ಲೆಕ್ಕಿಪುದೆ ಖಗಪತಿಯಂ ॥ 9 ॥

ತಮಗಡಸಿದೆಡರನೀಕ್ಷಿಸ ।
ದೆ ಮಹಾಂತರ್ ಪೆಱರ ಸಂಕಟಮನಪಹರಿಪರ್ ॥
ಹಿಮರುಚಿ ತನ್ನಯ ಮರ್ಬಂ ।
ತೆಮರದೆ ತಿರೆಯೊಳ್ ತಗುಳ್ದ ತಮಮಂ ತವಿಪಂ ॥ 10 ॥

ಎಪಗರ್ಳೊಳುಪ್ಪ್ಕಿಸುತ್ತಿರ್ದೆ ।
ಗಿಡರಱಿದರ್ ಜನರಬ್ಬು ಸಿಟಿಸಿಸಿಗೊಳ್ವರ್ ।
ಗಿಡುಗಗಳನಡುಗಿಪ ಸುಟ್ಟುರೆ
ನಡುಕಮನೋದವಿಕಾಪಿ ಕಲ್ಲ ಕೆಂಫದೊಳಿಸಿಸಂ ॥ 11 ॥

ನವರಂಧ್ರಂಗಳ್ಗೆಡೆಯಾ ।
ದ ವಪುವ್ರೊಳಸು ಪೋಪುದಲ್ತು ನಿಲ್ವುದು ಚಿತ್ರಂ ।
ನವರಂಧ್ರಕಲಿತಘಟದೊಳ್ ।
ಭುವನಂ ನಿಲ್ವುದೊ ಜಿನುಂಗುವುದೊ ಬಿಸವಂದಂ ॥ 12

ಕಡುಬಡತನಮಡಸಿದೊಡಂ ।
ಕುಡುವಂ ಗಡ ಚಾಗಿ ಬೇಡಲೊಡವುಳ್ಳನಿತಂ ॥
ಕಡಲಣುಗಂ ಕುಂದಿದೊಡಂ ।
ಕುಡದಿರ್ಪನೆ ಪೊ-ವಿಗೊಲ್ದು ತನ್ನಯ ಬೆಳಗಂ ॥ 13

ಎನ್ನೈಸಿರಿಯುಪೊಲೆಲ್ಲಿಯು ।
ಮಿನ್ನೈಸಿರಿಯಿಲ್ಲಮೆಂದು ಬೆಜೆಯಲ್ವೇಡಂ ॥
ಸೊನ್ನೆಯು ಬೆಟ್ಟುಂ ಮುನ್ನಂ ।
ಪನ್ನಗಭೂಷಣನ ಕೆಯ್ಯೊಳುಡುಗಿದುದಲ್ತೇ ॥ 14

ಕುಲವೇವುದರ್ಥವೇವುದು ।
ಕಲೆಯೇವುದು ಕರುಣೆಯಿಲ್ಲದಾತಂಗಿಳೆಯೊಳ್ ।
ಕಲನಾದನೇವುದೇಡಂ ।
ಗೆ ಲಸದ್ದೀಪಿಕೆಯದೇವುದೋ ಕುರುಡಂಗಂ ॥ 15

ಗುಣಿಗಳ್ ತಮ್ಮಯ ಪೆರ್ಮೆಯ ।
ನೆಣಿಸದೆ ಕೀಳ್ಪಡೆಗಮೆಯ್ದಿ ಸಾಹ್ಯಮನೆಸಪರ್ ।
ಎಣೆಯಿಲ್ಲದ ಪೆಂಪಾಂತೊಡ ।
ಮೊಣಗಿದ ಕಾಲ್ಗಳೊಳಮೆಯ್ದಿ ಪರಿಯದೆ ಮುನ್ನೀರ್ ॥ 16

ತನಯಂ ಕುಡುವುದನುಟಿವನೆ ।
ಜನಕಂ ಪೆಱಗಿರ್ಗಿತ್ತು ದೀನನಾದನೆನುತ್ತುಂ ॥
ಇನಿವಣ್ಗಳನೀಯದೆ ಪೇ ।
ಱನಿವಣ್ಗಳನಿತ್ತು ಸತ್ತ ಬಾಳೆಯ ಕಂದುಂ ॥ 17 ॥

ಇನಿವಾತಿಂದೊಲ್ವುದು ಮೇ ।
ಘನಸುಂ ಬಿಱುವಾತಿನಿಂದೆ ಮಱುಗುವುದು ಜನಂ ॥
ದಿನಪನ ಬಿಸುಗದಿರೋ ಱಂ ।
ದ್ರನ ತಣ್ಗದಿರೋ ಕಡಲ್ಗೆ ಪಾಲ್ಪುದು ಪೇೞಂ ॥ 18 ॥

ಖಳರಂ ಕಂಡಳ್ಕುತೆ ನಿ ।
ರ್ಮಳರಂ ಸುಜನಾಳಿ ನೋಡಿ ಪೊಂಪುಟಿಪೋಕುಂ ॥
ಕಳೆಗುಂದುತೆ ಸುಟ್ಟುರೆಯಿಂ ।
ತಳರ್ವುದು ತೆಂಬೆಲರ ತೀಟದಿಂ ಸಹಕಾರಂ ॥ 19 ॥

ಪೆಱರೞಲಂ ತಮ್ಮೞಲೆಂ ।
ದಱಿದುರಿಯೊಳ್ ಬೆಣ್ಣೆಯಂತೆ ಕರಗುವರಱಿದರ್ ॥
ಕಱೆವುವು ಕಣ್ಗಳ್ ನೀರಂ ।
ಪೆಱತೊಂದೊಡೆಯಲ್ಲಿ ಮೆಯ್ಯೊಳೀಕ್ಷಿಸಿ ರುಜೆಯಂ ॥ 20 ॥

ಬೆಳ್ಳಕ್ಕರಿಗರ ಕಲ್ಪಿಯ ।
ದೆಳ್ಳನಿತುಂ ತೋರ್ಕೆವಡೆಯದಱಿದರ ಪೊರೆಯೊಳ್ ॥
ಬೆಳ್ಳಂಗೆಡೆದಿನನ ಕದಿರ್ ।
ದಳ್ಳಿಸೆ ಮಿಂಬುಱುವಿನೆಸಕಮೇನೆಸೆದಪುದೋ ॥ 21 ॥

ವಿಲಸದ್ಗುಣದಿಂದಲ್ಲದೆ ।
ಕುಲದಿಂದಮೆ ಪೂಜ್ಯರಪ್ಪರೇ ಜನರಿಳೆಯೊಳ್ ॥
ಜಲನಿಧಿಯೊಳೊಗೆದುದೆನುತಿರ ।
ದೊಲವಿಂ ಸೇವಿಸುವರಾರೊ ಹಾಲಾಹಲಮಂ ॥ 22 ॥

ಪಟಿಪೂರ್ದದರುಂ ಪಾಟಿಯು ।
ನುಟಿವರ್ ಕಿವಿಗುಡುತೆ ನೀಚಬೋಧೆಗೆ ನಿಚ್ಚಂ ॥
ಕುಟಿಯಾಂಪುದಲ್ತೆ ಕಲ್ಲುಂ ।
ಬಟಿಸಾರ್ದಾಗಳುಮಿಱುಂಪೆಗಳ್ ಪರಿವುದಱಿಂ ॥ 23 ॥

ಗುಣಮೆನಿತಿರ್ದೊಡಮವನುಟಿ ।
ದಣುಮಾತ್ರಮನೊರೆದು ದೋಷಮಂ ಖಳನೊಲ್ವಂ ॥
ಉಣ್ಣಲಿನಿವಣ್ಣಳನೆಳಸದೆ ।
ತಣಿಗುಂ ಬೇವಿಂದೆ ಕಾಗೆಯಾರವೆಯೊಡೆಯೊಳ್ ॥ 24 ॥

ಸಂತರ್ ನೀಚರ ಸಂಗದಿ ।
ನೆಂತುಂ ನೀಗಿದಪರಾತ್ಮಗೌರವಮನಿತಂ ॥
ಮುಂತೆನಿತು ಬಿಣ್ಣಿತಾದೊಡ ।
ಮೆಂತಕ್ಕುಂ ಪೇೞ ತೆಪ್ಪದೊಳಗಿಟ್ಟ ಪುರುಳ್ ॥ 25 ॥

ತನು ಕಿಱಿದಪ್ಪುದಱಿಂದೊ ।
ರ್ವನಱಿವುಮಂತಪ್ಪುದೆಂದು ಭಾವಿಸರಱಿದರ್ ॥
ಇನಬಿಂಬಂ ಕಿಱಿದಾದೊಡ ।
ಮೇನದು [illegible]ಗಳೆಲ್ಲಮಂ ಬೆಳಗದೆ ಪೇೞ್ ॥ 26 ॥

ಪಾರದೆ ಮುಯ್ಯಂ ಪೆಱಗಿಂಪ ।
ಕಾರಮನಾಸತ್ತುಮೆಸಪರೊಲವಿಂ ಸುಜನರ್ ॥
ಪಾರದೆ ನಿಜಲಾಭಮುನಾ ।
ಹಾರಮನಗಿದೀವುವಲ್ತೆ ರಸನೆಗೆ ಪನೆಗಳ್ ॥ 27 ॥

ಮುಳಿಸಿನೊಳಪಾವರುತ್ತಮ ।
ರಳವಟಿದೊಲವಿನೊಳಮೇನುಮಂ ಕುಡರಧಮರ್ ॥
ಎಳಗಾಯುಮಾಮ್ರವೃಕ್ಷದೊ ।
ಳಳವಡುಗುಮುಣಲ್ಕೆ ಬೇವು ಪಣ್ತೊಡಮೇನೋ ॥ 28 ॥

ಬೊಮ್ಮನೊಳೆರ್ದೆಯುಂ ನಿಲಿಸಿದ ।
ದಿಮ್ಮಿದರಳ್ಕರ್ ಶರೀರದೆಡರ್ಗಳ್ಗೊಂದುಂ ॥
ಉಮ್ಮಳಿಪುದೆ ಚಂದಿರನಂ ।
ನೆಮ್ಮಿದ ಹರಿಣಂ ಮೃಗಾರಿಯುಂ ಕಂಡಿಳೆಯೊಳ್ ॥ 29 ॥

ಮಿಟ್ಟುವಸುಂಗೊಳಲೆಯ್ದುವ ।
ಪೊತ್ತಿನೊಳೇಗೆಯ್ವೆ ಮುನ್ನಮೊಲ್ದಸಗಱನಂ ॥
ಎಟ್ಟರೆ ಪೂರಂ ಸೇತುವ ।
ನಟ್ಟಿಯಿನೆಸಗಲ್ಕೆ ಪೋಪುದಱಿಯುಮೆಯಲ್ತೇ ॥ 30 ॥

ಪೆಱರ್ಗಡಸಿದ ಸಂಕಟಮಂ ।
ಪಱಿಯಿಸುವರ್ ಪಿರಿಯರಾತ್ಮಖೇದಕ್ಕಲಸರ್ ॥
ಪೆಱವಱೊಳಂಗಂಗಳೊಳೇ ।
ಱಿಱಿವಂದಿಱಿಯುದಪ್ಪೊಲಾಂತು ಕೆಯ್ಯೇರ್ಪಱುಗುಂ ॥ 31

ಉಜ್ಜುಗಿಸಿ ಜಡನೊಡಱರ್ಚುವ ।
ಕಜ್ಜಂ ಪಿರಿದಕ್ಕೆ ವಿಫಲಮವಿವೇಕಿತೆಯಿಂ ॥
ಬಜ್ಜರದೆ ಸಮೆದ ಕದಮುಂ ।
ಪಜ್ಜಳಿಪ್ರೌಢಮಗುೞೆಯಿಲ್ಲದೇಗೆಯ್ದಪುದೋ ॥ 32 ॥

ಅಱಿಯುದರಂ ಸತ್ಪಥದೊಳ್ ।
ನಿಱಿಸಲ್ ತುತಿಪೞೆಗಳೊಳವು ಬುಧರ್ಗವು ಬೇಡಂ ॥
ಕಿಱುವೆಂಚೆಗೆ ಕಟ್ಟುಂಟಾ ।
ತೆಱದಿಂ ವಾರಿಧಿಗೆ ಕಟ್ಟಸಾರೆಸಗುವರೋ ॥ 33 ॥

ಅಱಿದರ್ ಪೞಿಗಂಜುವವೋಲ್ ।
ಪೆಱರಂಜುವರೇ ವಿವೇಕಶೂನ್ಯರ್ ಧರೆಯೊಳ್ ॥
ತುಱುಗಿದ ತಮದಿಂದಳ್ಕುತೆ ।
ಪೆಱಸಾರ್ವುದು ಪೇೞಿ ಕಾಣ್ಬ ಕಣ್ಣೋ ಕುರುಡೋ ॥ 34 ॥

ಕಲ್ತವರಱಿದರೊಳೊಡಗೂ ।
ಡಲ್ತವಕಿಸುವಂತಿರಜ್ಞರೇಂ ತವಕಿಪರೇ ॥
ಪೊಲ್ತವರಾಜಕ್ಕೆಳಸುವ ।
ಪೋಲ್ತುಕ್ರಂ ನೋೞ್ಪೊಡೆಂದುಮೊಳಸಿದಪುದೆ ಪೇೞ್ ॥ 35 ॥

ತಕ್ಕಗ್ಗರ್ಬ್ಕಱಿನೀವಂ ।
ಮಿಕ್ಕಗ್ಗೀವನೆ ವಿವೇಕಿ ಬೇಡಿದ ಪುರುಳಂ ॥
ಇಕ್ಕುವರಾರ್ ನೆಲ್ಗಲ್ಲದೆ ।
ತೆಕ್ಕನೆ ತೀವಿರ್ದ ಪುಲ್ಗೆ ಪೊನ್ನಂ ಕೆಯ್ಯೊಳ್ ॥ 36 ॥

ಪಿರಿಯರ ಪೊರೆಯೊಳ್ ತನ್ನಂ ।
ಪೊರೆಯೇಱೆ ಪೊಗೞ್ದು ಕೊಳ್ವ ಗಾಂಪಂ ಕಿಡುವಂ ॥
ಮುರಹರನಿದಿರೊಳ್ ಗೞಪುತೆ ।
ಮರಣಮನೆಯ್ದಿದುದನಱಿಯ ಖಳಶಿಶುಪಾಳಂ ॥ 37 ॥

ಉತ್ತಮರೊಳ್ ಬಳೆದಾ ಕೆಳೆ ।
ಯೆತ್ತಂ ಫಲಹೀನಮಲ್ತು ಖಳಸಂಗಂಬೋಲ್ ॥
ಮುತ್ತೊಡೆ ಪಿಡಿ ಪಣ್ಣಕ್ಕುಂ ।
ಮತ್ತಿನ ತಳಿರೇನುಣಲ್ಕೆ ಪಣ್ಣಾದಪುದೇ ॥ 38 ॥

ಬಿಜ್ಜೆಯನನಿತಂ ಕಲ್ತೊಡ ।
ಮುಜ್ಜಳಿಪ ವಿವೇಕಮಿಲ್ಲದಂದದು ನಿಷ್ಫಲಂ ॥
ಸಜ್ಜುಕಮೆನಿತಿರ್ದೊಡಮೇಂ ।
ಗೊಜ್ಜಗೆ ಬೇಱುಗುಮೆ ಕಂಪನಲರದ ಮುನ್ನಂ ॥ 39 ॥

ಭೂಷಣಭೂಷಿತರರಸರ
ಶೇಷಕಲಾಭರಣರಪ್ಪ ಬುಧರ್ಗೆಂತು ಸಮರ್ ॥
ಭೂಷಣಜಾಲವಿಭೂಷಿತ
ಶೇಷಾವಯವಂಗಳಕ್ಷಿಗೆಣೆಯಾದಪುವೇ ॥ 40 ॥

---

ವೇಳೆಯೊಳಾರ್ತರ್ಗೆ ಮುದಂ
ದಾಳುತ್ತುಪಕೃತಿಯನೆಸಗೆ ಸಫಲಮುದಕ್ಕುಂ ॥
ತಾಳೊಳ್ ಪೊಯ್ದಾ ನೀರಂ
ತಾಳುತೆ ತಲೆಯಲ್ಲಿ ತೆಂಗು ಮಗುಳ್ದೀಯದೆ ಪೇಳ್ ॥ 41 ॥

ಕುಲಜಂಗೊಡರಿಸಿದುಪಕೃತಿ ।
ಶಿಲೆಯೊಳ್ ಕಂಡರಿಸಿದಕ್ಕರಂಬೋಲ್ ಮೆಱೆಗುಂ ॥
ಜಲದೊಳ್ ಬರೆದಕ್ಕರದಂ ।
ತೆ ಲಯಿಪ್ಪುದಾಗಳ್ ಖಳಂಗೊಡರ್ಚಿದ ಸಾಹ್ಯಂ ॥ 42 ॥

ಸಂಕಟಮಡಸಿರ್ದೊಡಮುಕ್ಕ ।
ಳಂಕರ್ ನಿಜಸುಗುಣಲೇಶಮುಮನುೞಿದಪರೇ ॥
ಸಂಕಂ ಸುಡೆ ಬೆಳ್ಪಂ ಕೀ ।
ರಂ ಕಾಸೆ ತನತ್ತು ಸವಿಯನಿನಿಸುೞಿದಪುದೇ ॥ 43 ॥

ಅಳವಂ ಮಿಱಿ ಬಟಿಲ್ದೇ ।
ನೆಳಸಿದ ಕಜ್ಜಂಗಳುಚಿತಕಾಲದೆ ಫಲಿಕುಂ ॥
ನಳನಳಿಸಿ ಬೆಳೆದೊಡಂ ತರು ।
ಫಳಮಂ ತಳೆದಪುದೆ ಕ್ಲೃಪ್ತಕಾಲಕೆ ಮುನ್ನಂ ॥ 44 ॥

ಮಣಿವರೆ ವೈರಿಗೆ ಪರಣಂ ।
ತೃಣಕೆಣೆಯೆಂದೆಣಿಪ ಧೀರರೆಡರಡಸಿದೊಡಂ ॥
ಮಣಿಗುಮೆ ಬಾಗಿಪ್ಪೊಡಂ ಮೇ ।
ಗಣ ಭಾರಂ ಕಲ್ಲ ಕಂಭಮಿರ್ಕಡಿಯಕ್ಕುಂ ॥ 45 ॥

ಓದಿಂಗನುಗುಣಮಕ್ಕುಂ ।
ಬೋಧಂ ಗುಣಮಕ್ಕುಮನ್ವಯಕ್ಕನುರೂಪಂ ॥
ವಾದಕಕೌಶಲಕನುಗುಣ ।
ಮಾಧುರ್ಯ್ಯಂ ನಾದಮಲ್ತೆ ವೀಣೆಯೊಳೆಂದುಂ ॥ 46 ॥

ಒಳ್ಳಿತು ಸುಜನರ ದರ್ಶನ ।
ಮೊಳ್ಳಿತವಂದಿರ ಹಿತೋಪದೇಶಶ್ರವಣಂ ॥
ಒಳ್ಳಿತ್ತವರ ಸಮಾಗಮ ।
ಮೊಳ್ಳಿತು ಮೇಣವರ ಸದ್ಗುಣಾವಳಿಕಥನಂ ॥ 47 ॥

ಪೊಲ್ಲದು ನೀಚರ ನೋಟಂ ।
ಪೊಲ್ಲದವರ್ ನುಡಿವ ನುಡಿಗೆ ಕಿವಿಗುಡುವುದು ಮೇಣ್ ॥
ಪೊಲ್ಲದವಂದಿರ ಕೂಟಂ ।
ಪೊಲ್ಲದು ಕೇಳವರ ಗುಣಮನೊರೆವುದದಾರ್ಗಂ ॥ 48 ॥

ಸಲ್ಗುಂ ಜಗಕೆಲ್ಲಂ ಮೆಚ್ಚೆ ।
ನಲ್ಗಜ್ಜಮನೆಸಪ ಜನರ ದೂಸಱೆನೆಂದುಂ ॥
ನೆಲ್ಗಂದೆಱೆದ ಜಲಂ ಪರಿ ।
ಕಾಲ್ಗಳೊಳೆಯ್ದುತ್ತೆ ಪುಲ್ಗಮನುಕೂಲಿಸದೇ ॥ 49 ॥

ಪಾರದೆ ಕೃಪಣರ ಸಿರಿಯಂ ।
ಸಾರುತೆ ಬಡವನನುದಾರನಂ ಜನಮೊರೆಗುಂ ॥
ನೀರಧಿಯ ನೀರನೀಂಟದೆ ।
ತೀರದ ಬಗರಗೆಯನಲ್ತೆ ತೃಷಿತರ್ ಸಾರ್ವರ್ ॥ 50 ॥

ಬಡವಾದೊಡಲಂ ಕಾಣುತೆ ।
ಕಡೆಗಣಿಸದಿರಾರುಮಂ ವರಾಕರೆನುತ್ತುಂ ॥
ಕಡಿಯದೆ ಕಿತ್ತುಳಿ ಕಲ್ಲಂ ।
ಕುಡಿಯನೆ ಕೆನ್ನಂ ಕಡಂಗಿ ಕಿತ್ತಡಿ ಕಡಲಂ ॥ 51 ॥

ಕಾಡೊಳ್ ಕವಲ್ತು ಪಕ್ಕಿಗ ।
ಳಾಡುಂಬೊಲನಾಗಿ ನಿಲ್ತುದದು ಮರನಲ್ಲಂ ॥
ನೋಡುತೆ ಪಲರ್ವೆ ಕೆಯ್ಯೊಳ್ ।
ನೀಡಿದ ಹೊತ್ತಗೆಯನೋದಲಱಿಯದನೆ ಮರಂ ॥ 52 ॥

ಕಿವಿಗಮರ್ದಂ ಕಱೆವ ಮಹಾ ।
ಕವಿಕೃತಿಯುಂ ಕೇಳ್ದು ಕುಕವಿಯೆಸಪ್ಪುದು ಕೃತಿಯುಂ ॥
ನವಿಲಾಡೆ ನೋಡಿ ಚೆಂಬೋ ।
ತವೆಱಂಕೆಯನೊಲ್ದು ಬಿರ್ಚಿದಂತೆಪ್ಪೊಲಕ್ಕುಂ ॥ 53 ॥

ಕರುಣೆಯಿನತಿನೀಚಗ್ಗುರ್ಪ ।
ಕರಿಪುದು ನಿಷ್ಫಲಮಪಾಯಕರಮಪ್ಪುದು ಮೇಣ್ ॥
ಉರಿಯಲ್ಲಿ ಬಿಟ್ಟ ತೇಳಂ ।
ಕರದಿಂ ಪೊಱಗಣ್ಗೆ ತೆಗೆಯಲೊಡಮಿಱಿಯದೆ ಪೇೞ್ ॥ 54 ॥

ಏನುಂ ತಿಳಿಯದರೆಂಬಿನ ।
ಮಾನತರಾಗಿರ್ದು ಕೇಡನೆಸಪರ್ ಧೂರ್ತರ್ ॥
ಏನುಮನಿದಱಿದುದಿಲ್ಲನೆ ।
ಮೀನಂ ಪಾರ್ದಿಸಿಕನಿರ್ಪುದಲ್ತೆ ಬಕೋಟಂ ॥ 55 ॥

ಎಡರಡಸಿದಾಗಳುಂ ಬಿಡ ।
ದೊಡನಿರುತುಂ ದುಃಖಭಾಗಿಯಪ್ಪಂ ಕೆಳೆಯಂ ॥
ಬಿಡದೊಡನಿರ್ದೊಣಗಿದ ಕೊಳ ।
ದೆಡೆಯೊಳ್ ತಾವರೆಯುಮಾವಲುಂ ಬಾಡವೆ ಪೇೞ್ ॥ 56 ॥

ಒಡವುಟ್ಟಿದರೇಂ ನಂಟರೆ ।
ಒಡವುಟ್ಟಿಯೆ ಕೊಲ್ಗುಮಲ್ತೆ ಕುತ್ತಂ ನರಸಂ ॥
ಅಡವಿಯೊಳ್ ಪುಟ್ಟಿ ಮೂಲಿಕೆ ।
ಕಿಡಿಕುಂ ಗಡ ರುಜೆಯುನನ್ನರುಂ ಭುವಿಯೊಳ್ಳೊಳರ್ ॥ 57

ಮನೆಯೊಳ್ ಗುಣವತಿ ಸತಿಯಿರೆ ।
ಮನದಣ್ಣಂಗಿಲ್ಲದಿರ್ಪ ಪುರುಳೊಂದುಂಟೇ ॥
ವನಿತೆ ಗುಣರಹಿತೆಯಾದೊಡೆ ।
ಮನೆಯಲ್ಲದು ಕೊಲ್ವ ಪುಲಿಯ ನೆಲೆಯೆನವೇಳ್ಕುಂ ॥ 58 ॥

ಮುಳಿದೊಡೆ ನೀಚರ್ ಕಲ್ಗೋ ।
ಳ್ಗಳವೋಲ್ ಬೇಱಾಗಿ ಮತ್ತೆ ಬೆರೆಯರ್ ಪೊನ್ಗೋ ॥
ಳ್ಗಳವೋಲ್ ಮೆಲ್ಲನೆ ಮಧ್ಯಮ ।
ರಳವಡುವರ್ ಪಾರದಂಬೊಲಾಗಳೆ ಸುಜನರ್ ॥ 59 ॥

ಗಾವಿಲರಱಿಯದರಂ ಮೇ ।
ಧಾವಿಗಳಱಿದರನೊಱಲ್ದು ಸಾರ್ವುದು ಸಾಜಂ ॥
ಬೇವಂ ಸಾರ್ವುದು ಕಾಕಂ ।
ತಾವರೆಗೊಳನಂ ಮರಾಳನೆಯ್ದುವುದೊಲವಿಂ ॥ 60 ॥

ಅಂಜುವರಮಳಗೆ ದೇಯುಂ ।
ಪೊಂಜಾವ ದುರ್ಗುಣಕಳಂಕಿತರ್ ನಯರಹಿತರ್ ॥
ನಂಜಿರ್ಪುದಱಿಂ ತನ್ನೊಳ
ಗಂಜಾತೆ ಮೊಗ್ಗರೆಗುಮಲ್ತೆ ಕಾಳಭುಜಂಗಂ 61

ಅರಸನುಮಱಿದನುಮಾರಯೆ ।
ಸರಿಯೆಂದೊರೆವುದು ವಿವೇಕವಿರಹಿತವಚನಂ ॥
ಅರಸಂ ತನ್ನಯ ನಾಡೊಳ್ ।
ಗುರುತೆಯನೆಯ್ದಿದಪನಱಿದನೆಲ್ಲಿಯುಮಿಳೆಯೊಳ್ ॥62॥

ಕಲ್ಲದ ಮನುಜಗ್ಗಱಿದರ ।
ಸೊಲ್ಲೆಂದುಂ ಮಿಱ್ತು ಮಿಱ್ತು ನೀಚಗ್ಗಱನುಂ ॥
ಪೊಲ್ಲಿವಳೆನಿಸಿದ ಪೆಣ್ ಮನೆ ।
ಯಲ್ಲಿರ್ಪ ಮಿಱ್ತು ಮಿಱ್ತು ಬಾೞ್ತೆಗೆ ಕಾಯ್ಗಳ್ ॥ 63 ॥

ಏೞದಪರಂಪರೆ ಪಿರಿದುಂ ।
ಮೋದಿದೊಡಂ ಸಂತರಾತ್ಮಶೀಲಮನುೞಿಯರ್ ॥
ತೇಯತಿಕೃಶಮಾದೊಡಮಾ ।
ಮೋದಂಗುಂದುಗುಮೆ ಪೇೞ ಸಿರಿಕಂಡಮಣಂ ॥ 64 ॥

ಹರಿಸಮುಮಾಪ್ಪುಂ ವಿದ್ಯಾ ।
ಪರಿಣತಿಯುಂ ರೂಪುಮೊಳ್ಪುಮುನ್ನತಕುಲಮುಂ ॥
ಸಿರಿ ಬರ್ಪಾಗಳ್ ಬರ್ಪುವು ।
ಸಿರಿ ಪೋಪಂದೊಡನೆ ಪೋಪುವೇನಚ್ಚರಿಯೋ ॥ 65 ॥

ಎನ್ನೆವರಮಿರ್ಪುದಸು ತನ ।
ಗನ್ನೆವರಂ ಗುಣಿ ಪರೋಪಕಾರಮನೆಸಪಂ ॥
ಮನ್ನಿಸದೆ ಮಾನಸರ್ ಕಡಿ ।
ವನ್ನೆವರಂ ಕುಡದೆ ವಿಟಪಿ ಪಣ್ಣಂ ನೆೞಲಂ ॥ 66 ॥

———

ತೊಡವಾಗಸಕ್ಕೆ ನೇಸಱ್ ।
ತೊಡವು ಕೊಳಕ್ಕಂಚೆ ತೊಡವು ನಂದನಕೆ ನವಿಲ್ ॥
ತೊಡವು ಮನೀಷಿಗೆ ವಿನಯಂ ।
ತೊಡವು ಕುಲಾಂಗನೆಗೆ ಸಂದ ಪಾತಿವ್ರತ್ಯಂ ॥ 67 ॥

ಪಿರಿದಾಗಿ ಕಣ್ಗೆ ಪ್ರೊಲನಾ ।
ದ ರೂಪಮಂ ಕಂಡು ಬೆಕ್ಕಸಂಬಡವೇಡಂ ॥
ಪಿರಿದಕ್ಕೆ ತಾಳಬೀಜಂ ।
ತರು ನೀಡುಂ ಬೆಳೆದುಮಿತ್ತಪುದೆ ಪೇೞ್ ನೆೞಲಂ ॥ 68 ॥

ಕಡುಕಿಱಿದಿದೇವುದೆನುತುಂ ।
ಕಡೆಗಣ್ಚುವನೆಗ್ಗನಲ್ತೆ ವಸ್ತುವನೊಂದಂ ॥
ಕಡುಕಿಱಿದಾಲದ ಬೀಜಂ ।
ಪಡೆವೆರಸರಸರಿರೆ ಪೆಳೆದ ತರು ನೆೞಲೀಗುಂ ॥ 69 ॥

ಆವಗಮೊಡವೆರೆದೊಡಮೇಂ ।
ಗಾವಿಲರೊಳ್ ರೂಢಮೂಲಮಕ್ಕುಮೆ ನೇಹಂ ॥
ಆವಗಮಂಬುಪ್ರೊಳೆದಿರ್ದುಂ ।
ಪಾವಸೆ ಬೇರಿೞಿವುದಿಲ್ಲ ಪದ್ಮಾಕರದೊಳ್ ॥ 70 ॥

ಇತ್ತಪರಾರ್ತರ್ಗುಗ್ಗಳ್ವುದ ।
ನುತ್ತಮರಾಪನ್ನರಾದೊಡಂ ಬೇಡಲೊಡಂ ॥
ಬತ್ತಿದೊಡಂ ತೊಱೆ ಬಗರಗೆ ।
ಯತ್ತಣಿನೀಯದೆ ಪಿಪಾಸಿತರ್ಗ್ಗೆನಿನೀರಂ ॥ 71 ॥

ಪಸಿಯೊಪ್ರೊರ್ತ್ರೆನೆ ಪಸಿಯುಯು ।
ಣಿಸನಿಪ್ರೊರ್ಟ್ತ್ರಿಂಗಪೊರ್ಮೊರ್ ಕೊಳ್ಳನೆ ಕೊಳ್ಳಯ್ ॥
ಬೆಸನಮನೇನುಮನಱಿಯಯ್ ।
ಬಸಿಱೇ ನಿನ್ನೊಡನೆ ಬಾೞ್ವುದೆನಗರಿದೇವೆಂ ॥ 72 ॥

ವಿದ್ಯಾಪರಿಣತನಾದೊಡ ।
ಮುದ್ಯಮವಿರಹಿತನದೆಂತು ಪಡೆವಂ ಸಿರಿಯಂ ॥
ಉದ್ಯಾನದಲ್ಲಿ ತರುವಿಂ ।
ಹೃದ್ಯಫಲಂ ಮಂತ್ರಬಲದೆ ಬೀೞ್ವುದೆ ಧರೆಯೊಳ್ ॥ 73 ॥

ಪಿರಿದುಂ ಬಳಲ್ದು ಗಳಿಯಿಸಿ ।
ಪುರುಳಂ ಪೂೞ್ದಿಟ್ಟು ಕಿಡುವ ಮನುಜರೆ ಪೇೞೆಂ ॥
ಪರಣಂ ತೊಱೆಯುತ್ತೊಡಲಂ ।
ಪರಿವಾಗಳ್ ಬಯ್ತ್ತ ಪಣಮನನುಭವಿಸುವರಾರ್ ॥ 74 ॥

ನಱುನೆಯ್ಯನೆಱೆಯದುಣಿಸುಂ ।
ತೊಱೆ ಪೊರೆಯೊಳ್ ಪರಿಯದೂರುಮಾಶ್ರಿತರಱಿಲಂ ॥
ಪಱಿಯಿಸದೆಱೆತನಮುಂ ಗುಣ ।
ಕೞುಗೊಂಪಳನೆಸೆಯದಿರ್ಪ ಮನೆಯುಂ ವಿಫಲಂ ॥ 75 ॥

ಆಯಕ್ಕೆ ಮಿಕ್ಕುದೆನೆ ಕೆಯ್ ।
ಗಾಯದೆ ಬೀಯಮನೊಡರ್ಚುವಂ ಸ್ವಜನರೊಳಂ ॥
ಆಯತಿಕೆಗಿಡುವನತ್ತಂ ।
ಸ್ಥಾಯಿಯೆನಿಪ್ಪಂ ವಿಷಾದಭರಕೆಡೆಯಪ್ಪಂ ॥ 76

ಕುಲಮುಂ ಕಲ್ಪಿಯುಮಱಿವುಂ ।
ಚಲಮುಂ ಮಾನಮುಮುದಾರತೆಯುಮುದ್ಯಮಮುಂ ॥
ಬಲಮುಂ ನಾಣುಂ ನಲವುಂ ।
ಪಲಾಯನಂಗೆಯ್ವುವಲ್ತೆ ಪಸಿವೆಯ್ದಲೊಡಂ ॥ 77 ॥

ಸಿರಿವಂತನೆಡೆಗೆ ಪಲಬರ್ ।
ಕರೆಯದೊಡಂ ಪೋಪರರ್ಥಕಾಂಕ್ಷೆಯಿನಿಳೆಯೊಳ್ ॥
ಸರದೊಳ್ ತೀವಲೊಡಂ ನೀರ್ ।
ಕರೆದಪರಾರ್ ಬನ್ನಿಮೆಂದು ದರ್ದುರಕುಲಮಂ ॥ 78 ॥

ಆಚಾರಹೀನನೊರೆವ ಸ ।
ಮೀಚೀನಹಿತೋಪದೇಶಮೆರ್ದೆಗೊಂಡಪುದೇ ॥
ಲೋಚನರಹಿತಂ ಪ್ರೇಕ್ಷಣ ।
ವಾಚಾಲತೆಯಿಂದೆ ನಗೆಗೆ ಪಕ್ಕಾಗಿರನೇ ॥ 79 ॥

ಮೆಲ್ಲಿದುವೆನಿಪ್ಪ ನುಡಿಗಳ್ ।
ಗೆಲ್ಲಂಗೊಳ್ವಂತೆ ಬೆಟ್ಟಿದುವು ಕೊಂಡಪುವೇ ॥
ಮೆಲ್ಲಿತು ಮಹೀಜಮೂಲಂ ।
ಸಲ್ಲದೆ ಪೇೞ್ ಪಾರೆಗೆಡೆಯನೀಯದ ಕಲ್ಲೊಳ್ ॥ 80 ॥

ಪೂವದೆ ಕಾಯ್ವ ಮರಂಬೋಲ್ ।
ಭಾವಜ್ಞಂ ಪೇೞದಿರ್ದೊಡಂ ಬಗೆಯಱಿವಂ ॥
ಗಾವಿಲನೊರೆದೊಡಮಱಿಯಂ ।
ಭಾವಮನೇಗೆಯ್ದುಮಂಕುರಿಸದೊನಕೆಯವೋಲ್ ॥ 81 ॥

ಎಳವೆಯೊಳಲಸದೆ ಪಲವಂ ।
ಕಳೆಯಂ ಕಲ್ತೊಡೆ ಬಳಿಕ್ಕೆ ಪೂಜ್ಯತೆ ಬರ್ಕುಂ ॥
ಎಳದಾದಾಗಳ್ ಬಾಗಿದೊ ।
ಡಿಳೇಶಮುಕುಟೋಪರಿಸ್ಥಮಕ್ಕುಂ ಬಿದಿರುಂ ॥ 82 ॥

---

ಜಳಬುದ್ಬುದಮೆಳವೆ ಮನಂ ।
ಗೊಳಿಪ್ಪಸಿರಿ ತೋಯರಾಶಿತರಳತರಂಗಂ ॥
ಜಳಲಿಪಿ ಶರೀರಮೆನುತುಂ ।
ತಿಳಿದುಂ ಜನಮೇಕೆ ನೆನೆಯದಚ್ಯುತನಡಿಯಂ ॥ 83 ॥

ಪುರುಷಾರ್ಥಂಗಳ್ ನಾಲ್ಕುಂ ।
ದೊರೆಕೊಳ್ಗುಂ ಕೀರ್ತಿಲಹರಿ ಪರಿದಪುದೆತ್ತಂ ॥
ಸರಿದಪುದಾಂತರತಮಮೆನೆ ।
ಸರಿಯಾವುದೊ ಬಿಜ್ಜೆಯೆಂಬ ಸಾಧನಕಿಳೆಯೊಳ್ ॥ ॥ 84 ॥

ಮೊದಲೊಳ್ ಕಷ್ಟಮೆನಿಕ್ಕುಂ ।
ತುದಿಯೊಳ್ ನಿರುಪಮಸುಖಾನುಭವಮಂ ಪಡೆಗುಂ ॥
ಪುದಿದಱಿಯಮೆಯಂ ಕಿಡಿಕುಂ ।
ಮದಮಂ ಮಾಣಿಕುಮೆನಿತ್ತೊ ವಿದ್ಯಾವಿಭವಂ ॥ 85 ॥

ವಿದ್ಯೆಯೆ ಪತಿವ್ರತಾಸ್ತ್ರೀ ।
ಹೃದ್ಯಕವಿತ್ವಮೆ ಅಪತ್ಯಮಖಿಲಸ್ತುತ್ಯಂ ॥
ಮಾದ್ಯತ್ಪರಪುಷ್ಟಗಳ ।
ಪ್ರೋದ್ಯತ್ಕಲನಿನದದಿಂದಮಿನಿದದಱ ತೊದಳ್ ॥ 86 ॥

ಏವಾಪ್ತ್ರೆ ಕಲ್ಪಿ ಪೇೞ್ ಪ್ರ ।
ಸ್ತ್ರಾವಕ್ಕಳವಡದೊಡೇವುದಂತಳವಟ್ಟುಂ ॥
ಆವಾಗ್ಮಿತೆಯಿಲ್ಲದೊಡಿರೆ ।
ಸೌವರ್ಣಸುಮಕ್ಕೆ ಸೌಸವಂ ಸಮನಿಸದೇ ॥ 87 ॥

ಅಱಿದರ ಸಭೆಯೊಳ್ ನಡುಗುವ ।
ನಱಿವುಂ ನಿರ್ಭಯದೆ ಗೞಪುವಱಿಯದನಾರ್ಪುಂ ॥
ಪೆೞಗುರ್ಣಪಕೃತಿಯುಂ ಗೆಯ್ವೊಡೆ ।
ಮಱುಗುವ ನೆಲಕಲನ ಸಿರಿಯುಮೇಗೆಯ್ದಪುಪ್ರೋ ॥ 88 ॥

ಸರಸತಿ ಮೊಗದೊಳ್ ನೆಲಸೆಯು ।
ಮರವಿಂದೋದ್ಭವನಸದೆಂತು ಕವಿಗೆಣೆಯಪ್ಪಂ ॥
ಅಲರಿೞನೊಡರಪ್ರುಡಲ್ ನ ।
ಶ್ವರಮಂತಕ್ಕುಮೆ ಯಶಶ್ಶರೀರಂ ಕವಿಯಾ ॥ 89 ॥

ಓವದೆ ಬೞಲ್ದು ಕಲ್ತುದ ।
ನಾವಂ ಬೞಿಕಱಿವೆನೆಂದು ತಡವಾಡಿದಪಂ ॥
ಓವದೆ ಗೞಯಿಸಿದರ್ಥಮ ।
ನೇವಡೆ ಬೞಿಕೆರೆವ ಗಾಂಪನಂ ಪ್ರೋಲ್ವನವಂ ॥ 90 ॥

ಇನಿನುಡಿಯನಾದೊಡಂ ಬಡ ।
ವನೊಳಿರದೆ ಜನಂ ಕಠೋರವಚನಮನೊರೆಗುಂ ॥
ಧನವುಳ್ಳನೇಸನೆಂದೊಡ ।
ಮಿನಿದೆನ್ಸುಂ ನೋಡ ಜನದ ಜೆಳ್ಳನಮಂತೋ ॥ 91 ॥

ಕೃತವಿದ್ಯಂಗೇಕೆಯೊ ಬೇ ।
ಡೆ ತೊಡವು ಪಾಂಡಿತ್ಯಮಂಡನಂ ಸಾಲದೆ ಮಾ ॥
ರತುನದ ತೊಡವಿಂಗಮಲಂ ।
ಕೃತಿಯೇ ಸೊಬಗಿಂಗೆ ಸೊಬಗನೆಸಗುವರಾರೋ ॥ 92 ॥

ತಮ್ಮಿಂದೆ ಬಡವರಂ ಕಂ ।
ಡೆಮ್ಮೊಡಮೆಯೆ ಪಿರಿದೆನುತ್ತೆ ತೋಷಿಸಿ ತಿಳಿದರ್ ॥
ತಮ್ಮಿಂದೆ ಕಲ್ತರಂ ಕಂ ।
ಡುಮ್ಮಳಿಸುವರೇವುದೆಮ್ಮ ಕಲ್ಪಿಯೆನುತ್ತುಂ ॥ 93 ॥

ಸಿರಿಯುಂ ವಿದ್ಯಾಶ್ರೀಯುಂ ।
ಸಿರಿಯೆನಿಸುವುದಂಡೆ ತಮಗೆ ನಿಸ್ಸ್ವರುಂ ತಿಳಿಯುದರುಂ ॥
ಸಿರಮಂ ಬಾಗಿಪವೋಲ್ ಧನಿ ।
ಕರುಮಱಿದರುಮೆಂದು ತಾಮುಮಾನತರಪ್ಪರ್ ॥ 94 ॥

ಸಂತರ್ ವಿಶಾಱಿದ ಖಳರ್ಗಿದಿ ।
ರಾಂತೇಂ ನಿಲ್ತಪರೆ ಪೊಡವಿ ಪೊಗೞ್ವನಮೆಱಪರ್ ॥
ಎಂತು ಲಘವಸ್ತುವೇಱುವು ।
ದಂತಿಟೆಯದೆ ತೂಗೆ ಗುರುಪದಾರ್ಥಂ ತುಲೆಯೊಳ್ ॥ 95 ॥

ಅಕ್ಕರಿಗರ ಸಭೆಯೊಳ್ ಬೆ ।
ಳ್ಳಕ್ಕರಿಗರ್ ಸುಮ್ಮನಿರದೆ ನುಡಿವುದು ಬೆರ್ಚಂ ॥
ಪಕ್ಕಿಗಳಂತೆವ್ವೊಡಲಂ ।
ಚೆಕ್ಕನೆ ಕಂಡಳ್ಕಬೇಡಮೆಂಬಂತಕ್ಕುಂ ॥ 96 ॥

ಕಿಱಿಯರ ಕಿವಿಯೊಳ್ ಕಲ್ತುದ ।
ನುಱೆ ಪುಂಜಿಸಿ ತಿಳಿವು ಪ್ರೌಢಿವರ್ಗನುತುಂ ಬೊ ॥
ಬ್ಬಿತಿವನೊ ಕಲ್ಲಾಯ್ತುಂ ಪಾಂ ।
ಗಱಿದ್ಧಱಿವವರ್ಗುಣ್ಮವಂತು ಕಲಿಸುವನೋ ಮೇಣ್ ॥ 97 ॥

ಸ್ಥಾನದ ಬಲದಿಂ ಬೀಗಿದೊ ।
ಡೇನಕ್ಕುಂ ಗುಣಮೆ ಮಾನ್ಯಮೆಲ್ಲಿರ್ದೊಡಮೇಂ ॥
ಮಾನಾರ್ಹಮೆ ಮಾರ್ಜಾಲಂ ।
ಮಾನವಪತಿಯಂತವುರದೊಳಿರ್ದುಂ ಕರಿವ್ರೋಲ್ ॥ 98 ॥

ಹದಿಬದೆಗೆ ಪತಿಯೆ ದೈವಂ ।
ಸದಪತ್ಯಕೆ ತಂದೆತಾಯ್ವಿರರ್ಥಮೆ ಕೃಪಣಂ ॥
ಗುದರಂಭರಿಗೆಂದುಂ ತಾ ।
ನೆ ದೈವಮಾಚಾರ್ಯನಡಿಯೆ ಸಚ್ಛಿಷ್ಯಂಗಂ ॥ 99 ॥

ಏವುವು ಪಂದೆಗೆ ಕೆಯ್ದುಗ ।
ಳೇವುದು ಕೃಪಣಂಗೆ ಸಂಪದಂ ನಿಷ್ಕರುಣಂ ॥
ಗೇವುದು ವಿಭುತೆ ದುರಾತ್ಮಂ ।
ಗೇವುವು ಧರ್ಮೋಪದೇಶಹಿತವಚನಂಗಳ್ ॥ 100 ॥

ಪ್ರಜೆಗಳನುಡುಪತಿಯುಲರ್ವಂ ।
ಬುಜಂಗಳಂ ಕೊರಗಿಪಂತೆ ಕೊರಗಿಸಿ ತನ್ನೊಳ್ ॥
ನಿಜಸಂಕಟಂಗಳಂ ಪೇ ।
ೞೆ ಜಱೆದು ಪಲ್ಮಸೆವನರಸೆ ಜವನೆನವೇಟ್ಕುಂ ॥ 101 ॥

ಉಡುವುವನುಟ್ಟುಣ್ಬುವನುಂ ।
ಜೆಡೆಯುವರಂ ನೋಡದಾಪ್ತವಚನಕೆ ಕಿವಿಯಂ ॥
ಕುಡದೊಱಗುವರಸನಾರ ।
ಯ್ವೊಡೆ ಸುಯ್ವ ಪೆಣಂ ದಲೆಂಬರನವದ್ಯಗುಣರ್ ॥ 102 ॥

ಕಲದರ್ ನುಡಿವುದನೆಲ್ಲಂ ।
ನೆಲದೊಡೆಯರ್ ನಿಸದಮೆಂದು ಬಗೆವುದು ದೋಷಂ ॥
ವೊಲಕುಂಟು ಕೋಡು ತಂದೆಯ ।
ಕೊಲೆ ಶಾಸ್ತ್ರೋಕ್ತಂ ದಲೆಂಬರುಂ ಧರೆಯೊಳೊಳರ್ ॥ 103 ॥

ಪ್ರತ್ಯಕ್ಷವಾಗಿ ತೋಱೆಯು ।
ಮತ್ಯಾಹಿತವಱಿಯಲಾರ್ಪನೇ ಗಾಂಪನದಂ ॥
ಮೃತ್ಯುವಶಮಕ್ಕುಮಜಗರ ।
ಮತ್ಯುಗ್ರದವಾಗ್ನಿಯುಳುರೆಯುಂ ನಿದ್ರಿಸುತುಂ ॥ 104 ॥

ಪಗೆ ಕೆಳೆಯೊಳ್ ಕೆಳೆ ಪಗೆಯೊಳ್ ।
ನಗೆ ಪಿರಿಯರೊಳೊಲ್ಮೆ ತಗದರೊಳ್ ಪೆರ್ಚಿದ ನಂ ॥
ಬುಗೆ ಚಲ್ಲವತ್ತರೊಳ್ ಬ ।
ರ್ದುಗರೊಳ್ ಜಬ್ಬುಗರ್ಗಮುಂಟುಪಾಡವೆ ಕೇಡಂ ॥ 105 ॥

ಸಿರಿವಂತರೀಯೆ ಕಿಱಿದಂ ।
ಪುರುಳಂ ಪಲಬರ್ ದರಿದ್ರರುಣಿಸಂ ಪಡೆವರ್ ॥
ಕರಿ ಕೊಳ್ವ ಕಬಳದಂಶಂ ।
ತಿರೆಗುದಿರಲ್ ಪಲವಿಱುಂಪೆಗಳ್ಗುಣಿಸಕ್ಕುಂ ॥ 106 ॥

ಮಱೆವೊಕ್ಕವರಂ ಕಾವೊಡೆ ।
ಮಱೆದಪರೇ ನಿಜಕಳೇಬರಾನಿತ್ಯತೆಯಂ ।
ಬಱಿಮೆಯ್ಯನುೞಿದು ಜಸದಿಂ ।
ನೆಱೆದಾವಗಮೞಿಯದಿರ್ಪ ಮೆಯ್ಯಂ ಪಡೆವರ್ ॥ 107 ॥

ಮಾನಮನೀಡಾಡಿಯುಮಭಿ ।
ಮಾನಮನೀಯೊಡಲೊಳಾಂಪುದುಚಿತಮೆ ವಲಮೆಂ ॥
ದಾನುಂ ಕಳೇಬರಕ್ಕವ ।
ಸಾನಂ ದೊರೆಕೊಳ್ಳದಿರ್ಪೊಡಿಲ್ಲದೊಡಲ್ಲಂ ॥ 108 ॥

ಪೊಗೞೆ ನೃಪನೊಂದನಂತುಟೆ ।
ಪೊಗೞ್ದೊಂದಂ ತೆಗೞೆ ತಾನುಮಂತುಟೆ ತೆಗೞ್ದೀ ॥
ಜಗಮಿಂತುಟವನನೋಲಗಿ ।
ಸುಗುಮಂತೆಸಪರೆ ಮನಸ್ವಿಗಳ್ ಮಾನಧನರ್ ॥ 109 ॥

ಮತ್ತಮಹೀವಲ್ಲಭನು ।
ದ್ವೃತ್ತತೆಯಂ ಸೂಕ್ತಿಯಿಂದೆ ಕಿಡಿಸುಗೆ ಸಚಿವಂ ॥
ಮತ್ತೇಭಮನಂಕುಶದೆ ತ ।
ನತ್ತು ವಶಂ ಮಾಳ್ಪ ಚತುರಹಸ್ತಿಪಕಂಬೋಲ್ ॥ 110 ॥

ಗೆಲಲರಿದು ವಿಧಿಯನುದ್ಯಮ ।
ಬಲದಿಂದದಱಿಂ ಪ್ರಯತ್ನಮೇಕೆಂಬಜ್ಞ ॥
ಪ್ರಲಪಿತಮಂತಿರ್ಕುದ್ಯಮ ।
ಬಲದಿಂ ಗೆಲ್ಲನೆ ಮೃಕಂಡುಸುತನಂತಕನಂ ॥ 111 ॥

ಅಱಿದೆಡೆಯನಱಿದು ಕಾಲಮ |
ನಱಿದೆಸಗುವ ಕಜ್ಜದಾದಿಯಂ ಪರಿಣತಿಯಂ ||
ಅಱಿದುಪಕರಣಮನಲಸದೆ |
ತಱಿಸಂದೊಡರಿಸುವ ಕಾರ್ಯಮೊಂದುಮಮೋಘಂ || 112 ||

ಪಸಿವಂ ಬೞಲ್ಕೆಯಂ ಲೆ |
ಕ್ಕಿಸರನ್ಯರ್ ನುಡಿವ ಹಾಸ್ಯವಚನಂಗಳನಾ ||
ಲಿಸರೊಂದು ಕಜ್ಜದೊಳ್ ಮಾ ||
ನಸಮೊಱಕಂಗೊಂಡ ಮಾನಸರ್ ತೂಂಕಡಿಸರ್ || 113 ||

ಒಳಗೞ್ಕಜಂಬಡುತ್ತುಂ |
ಕೆಳೆತನಮಂ ಪೊಱಗೆ ಬಿಚ್ಚಟಿಪ ವಂಚಕರಂ ||
ಕಳೆವುದು ತೋಱಿಸಿ ಜಗಕೇ |
ಗಳನಾರ್ ಕಳೆಯದೆ ಚಿಕಿತ್ಸೆಯಿಂ ಬಯ್ತಿಡುವರ್ || 114 ||

ಮನದೊಳ್ ಕಱೆಯಿರೆಯೊಳ್ಳಿ |
ತ್ತನೊಡರ್ಚೆಯುಮದು ಜನಕ್ಕೆ ಪೊಲ್ಲದೆನಿಕ್ಕುಂ ||
ಮನಮಕುಟಿಲಮಾಗಿರೆ ದು |
ರ್ವಿನಯಮುಮೊಳ್ಳಿತ್ತೆನಿಕ್ಕುಮಾರಯ್ವುದಿದಂ || 115 ||

ಬಿಱುಮಾತು ಕೊಂಡೆಯಂ ಸಟೆ |
ಬಱುಮಾತೆಂಬಿನಿತು ಸೊಲ್ಲ ದೋಷಂಗಳುಮಂ ||
ತೊಱೆದಿಂದ್ರಿಯಮಂ ಸೋಲಿಸಿ |
ಕಱೆಯಂ ಮನದಿಂದೆ ಕಳೆದು ಬಾಳ್ವುದೆ ಶೀಲಂ || 116 ||

ಕುಲಜಂ ಬಡತನದಿಂ ಬಂ ।
ಬಲಬಾಡಿಯುಮೇನಕಾರ್ಯಮುಂ ಮಾಡುವನೇ ॥
ಪುಲಿ ಪಿರಿದುಂ ಪಸವಟ್ಟುಂ ।
ಮೆಲಲೇಂ ಬಗೆವುದೆ ಪಸುತ್ತೃಣ ಪುಲ್ಲಂ ಪಱುವೊಳ್ ॥117 ॥

ಬಕನಂತೆ ಸಮಯಮಂ ಪಾ ।
ರ್ದುಕುಟಿಲರ ಮನಕ್ಕೆ ಭೀತಿಯಂ ಪುಟ್ಟಿಸಿ ವಂ ॥
ಚಕನವರ ಪುರುಳನಪಹರಿ ।
ಸಿ ಕಾಡುವಂ ಮುಂದೆ ಬರ್ಪ ಕೇಡಂ ನೋಡಂ ॥ 118 ॥

ಪಡೆದುದನೇವಿರಿದೆನುತುಂ ।
ಪಡೆಯದುದಂ ಪಿರಿದೆನುತ್ತೆ ತೃಪ್ತಿಯನೆಂದುಂ ॥
ಪಡೆಯದನಮಿತೇಂಧನಮಂ ।
ಪಡೆದುಂ ನಿರ್ವೃತಿಯನೆಯ್ದದುರಿವೊಲ್ ಕಿಡುಗುಂ ॥ 119 ॥

ತಮ್ಮಯ ಕುಲಕಂ ಸ್ಥಿತಿಗಂ ।
ಸಮ್ಮತಮಪ್ಪಂತು ವರ್ತಿಸುತ್ತೇಪೊಱ್ತುಂ ॥
ತಮ್ಮಂತೆ ಪೆಱರನೀಕ್ಷಿಪ ।
ದಿಮ್ಮಿದರಿಂದಮೆ ಜಗಕ್ಕೆ ಸೊಗಮುದಯಿಸುಗುಂ ॥ 120 ॥

ಕುಡುವುದರಿದೆಂದೊಡಂ ಮೆ ।
ಲ್ನುಡಿಯೊಳಮೇಕಕಟ ಬಡತನಂ ಮೆಲ್ನುಡಿಯೇಂ ॥
ನುಡಿಯಲ್ಕಸದಳಮಕ್ಕುಮೆ ।
ಸುಡುಗುಮೆ ನಾಲಗೆಯನಸುಗಳಂ ಕುಡಿಗುಮೆ ಮೇಣ್ ॥121॥

ವರಮುತ್ತೆ ಪರಮುಲೋಭಿಯ ।
ಸಿರಿಯಿಂದಂ ಪೆಱರ ಬಪ್ಪತನಂ ನೋಡಿವರಂ ॥
ಪುರುಳಂ ಪೂಜಿಪ ಮರುಳರ್ ।
ಕರುಣಾಹೀನರ್ ವರಾಕರೆನ್ನದು ಲೋಕಂ ॥ 122 ॥

ತೊಯ್ದೊಡಮುಘಗೊಳ್ ಶಿಷ್ಯರ್ ।
ಬಾಯ್ದೆಱೆಯದೆ ಬಿನ್ನನಿರ್ಪ ಗುರುದಾಕ್ಷಿಣ್ಯಂ ॥
ಬಯ್ದೊಡೆ ಬಗೆ ಬೇಗುಂ ತಲೆ ।
ಗೊಯ್ದಪೆನೆಂಬನ ದಯಾತಿಶಯುಮಂ ಪೋಲ್ಗುಂ ॥ 123 ॥

ಪಿರಿಯರ್ ನಲ್ಗಜ್ಜಮನಾ ।
ದರದಿಂದಾವಗವೊಡಱರ್ಕುತಾರ್ಗಂ ಪೇೞರ್ ॥
ಪರಹಿತಮಿನಿತಿಲ್ಲದೊಡಂ ।
ಪಿರಿದುಂ ಪೊಗೞ್ದಪ್ಪರಾತ್ಮಗುಣಮಂ ಮೂಢರ್ ॥ 124 ॥

ಮುಡಿಯುತೆ ದಯಿತಪ್ರೇಮವ ।
ನುಡುತೆ ಪತಿವ್ರತೆಯ ಧರ್ಮಮಂ ಸದ್ಗುಣಮಂ ॥
ತುಡುತುಂ ಪೂಸುತೆ ನಾಣಂ ।
ತೊಡವಿನಿಯಂಗೆನಿಪ ಭಾರ್ಯೆಯಂ ಕೃತಿ ಪಡೆವಂ ॥ 125 ॥

ವಂಚಕರ ಮೌನಿವೇಷದ ।
ಕಂಚುಕಮಾರಯ್ಯೆ ನಿಷ್ಪ್ರಯೋಜನಮೊಡಲಂ ॥
ಕಂಚುಕದಂತಿರೆ ಪೊರೆದು ಪ ।
ಳಂಚಲೆವುದೆ ಚಳಯನುಂಟುಮಾೞ್ಪುದೆ ಸೊಬಗಂ ॥ 1 6 ॥

ಪಲರಂ ವಂಚಿಸಿದೆಂ ಕೌ ।
ಶಲದಿಂದಿದನಾರುಮಱಿಯರೆಂದಮಿತಾನಂ ॥
ದಲಹರಿಯೊಳಗೋಲಾಡದಿ ।
ರೆಲೆಮರುಳೆ ನಿನತ್ತು ತಕ್ಕನಱಿಯನೆ ದೇವಂ ॥ 127 ॥

ಮಱಸಿದೊಡಡಂಗುವುದೆ ಪಟಿ ।
ಪೞೆಯಂ ಪೊಯ್ದಂತೆ ಪಾಱಿ ಪಱುಂಗುವೆತ್ತಂ ॥
ಪೊಱಗೆಯ್ದಂತು ಮಱಸೆಯು ।
ಮಱಸಿ ಜನಘ್ರಾಣಕಡರದೇ ದುರ್ಗಂಧಂ ॥ 128 ॥

ಬಲ್ಲಿದನಿಳೆ ನಗೆ ಬಿೞ್ದೊಡೆ ।
ತಲ್ಲಣಿಪಂ ಮೆಲ್ಲಿದಂಗೆ ಕಳವಳಮುಂಟೇ ॥
ಪಲ್ಲಮಱೆ ಬಿೞ್ದೊಡಟೆದಪು ।
ದಲ್ಲದೆ ಕಿತ್ತಿಱುಪೆ ಬಿೞ್ದೊಡೇನಟೆದಪುದೇ ॥ 129 ॥

ನನೆ ನೋಟಮಲರ್ ನಗೆಮೊಗ ।
ಮಿನಿಗಾಯಿನಿವಾತು ದೋರೆವಣ್ಣುಪಚಾರಂ ॥
ತನಿವಣ್ಣುಮಾಗೆ ಚಾಗಂ ।
ಘನಮಹಿಮರ್ ನಡೆವ ಕಲ್ಪತರುಗಳೆನಿಪ್ಪರ್ ॥ 130 ॥

ಎಲ್ಲಮುಮನಱಿದರವನಿಯೊ ।
ಳಿಲ್ಲಿದನಾರಯ್ಯ ಕಿಱಿದನಱಿದುದಱಿಂ ನೀಂ ॥
ಬುಲ್ಲವಿಸಿ ಬೆೞೆಯುವೇಟ್ಟುದೆ ।
ಬಲ್ಲರ್ ಸ್ವಾಜ್ಞತೆಯನಱಿದೊಡದು ತಿಳಿವೆಂಬರ್ ॥ 131 ॥

———

ಬೆಳಗುಗುಮಿರುಳಂ ತಿಂಗಳ್ ।
ಬೆಳಗುಗುಮುಜ್ಜ್ವಳಿಪ ಕದಿರ್ಗಳಿಂ ರವಿ ಪಗಲಂ ॥
ಬೆಳಗುಗುಮಱನೀ ಜಗಮಂ ।
ಬೆಳಗುಗುಮನ್ವಯಮನಾತ್ಮಶೀಲದೆ ಪುತ್ರಂ ॥ 132 ॥

ಸುಗುಣಂ ಮಗನೊರ್ವಂ ಕುಲ ।
ಕೊಗೆದೊಡೆ ಸಾಲ್ಗುಂ ಕುಪುತ್ರರೇಕೆಯೊ ನೂರ್ವರ್ ॥
ಗಗನಕ್ಕೊರ್ನೆಱೆವೆಱೆಯಿಂ ।
ದೊಗೆವೆಸಕಂ ಪಲವು ಮೀಂಗಳಿಂದೊಗೆದಪುದೇ ॥ 133 ॥

ಮುದದಿಂ ಕರಿ ತುರಗಂ ವೇ ।
ಗದಿನರಸಂ ನೀತಿಯಿಂದೆ ಸತಿ ಪತಿಹಿತವ್ರ ॥
ತ್ರದಿನಿಂದುವಿಂದಿರುಳ್ ವಿನ ।
ಯದಿನಱಿದಂ ಶಮದೆ ಯೋಗಿ ಶೋಭಿಕುಮಿಳೆಯೊಳ್ 134 ॥

ಮೊದಲೆ ದುರಾತ್ಮಂ ಪ್ರಭುತೆಯು ।
ಮೊದವಲೊಡಂ ಜನಕೆ ಪಡೆಯದಿರನದವಬಲಂ ॥
ಮದಿರೆಯನೀಂಟಿಸಿ ಕೋಡಗ ।
ಕಿದಿರೊಳ್ ಕೊಳ್ಳಿಯುಮನಿರಿಸೆ ಸುಡದಿರದೂರಂ 135 ॥

ಅಱಿಯದನೆಡೆಯೊಳ್ ರಸದಿಂ ।
ತುಱುಗಿದ ಕವಿತೆಯನೊಱಲ್ದು ಪೇೞ್ವುದು ವಿಫಲಂ ॥
ನಱುಮಲರ್ದೊಂಗಲ ಸೊಬಗಂ ।
ಮಿಱುಗುವ ಮಾಣಿಕದ ಬೆಲೆಯನಱಿಗುಮೆ ಕೋಡಂ ॥ 136 ॥

ಪಿರಿದುಂ ಬೞಲ್ದು ವಿದ್ಯಾ ।
ಪರಿಣತಿಯುಂ ಪಡೆದರಂತಿರಜ್ಞರ್ ತಿಳಿದ ॥
ಪ್ಪರೆ ಕಲ್ವ ಕಷ್ಟಮುಂ ಪೆ ।
ತ್ತರಂತೆ ತಿಳಿದವರೆ ಬಂಜೆಯರ್ ಸೂಲಱಿಲಂ ॥ 137 ॥

ಪತ್ತುಗೆಗೊಳ್ಳದ ಕೆಳೆಯುಂ ।
ಹೊತ್ತಗೆಯೊಳಗಿರ್ಪ ಬಿಜ್ಜೆಯುಂ ದುರುಳರ ಕೈ ॥
ಯ್ಗಿತ್ತ ಕಡವರಮುಮೇನಾ ।
ಪತ್ತಿನೊಳೊರ್ವಂಗೆ ಪೇೞ ನೆರವಾದಪುವೇ ॥ 138 ॥

ತನಗಿತ್ತ ಘಾಸಮುಂ ಮೇ ।
ದಿನಿವಾಲಂ ತುಱು ಜನಕ್ಕೆ ಕುಡುಗುಂ ಪಾಲಂ ॥
ತನಗೆಱೆಯೆ ನಂಜನುಗುೞ್ದಪು ।
ದು ನಾಗಮದರಿಂದಪಾತ್ರವಿತರಣಮಗುಣಂ ॥ 139 ॥

ಅನುವಿಂದೆ ಬೇೞ್ಪರರ್ಹತೆ ।
ಯನಱಿದು ಬಡವರ್ಗ್ಗೆ ನಲವಿನೀವುದೆ ದಾನಂ ॥
ಧನಿಕಂಗೆ ಮಾೞ್ಪ ದಾನಂ ।
ವನನಿಧಿಯೊಳ್ ಕಱೆ ವಮೞೆಗೆ ತೊಣೆಯೆನಲಕ್ಕುಂ ॥ 140 ॥

ಪೊಱಗಣ ಸೊಬಗನೆ ನಿಟ್ಟಿಸಿ ।
ನೆಱೆ ಸೋಲ್ವುದು ತಕ್ಕುದಲ್ತು ಪರಿಕಿಸು ಗುಣಮುಂ ॥
ಪೊಱಗೆಡ್ಡಮಾದೊಡಂ ಪೇೞ್ ।
ನಱುಗಂಪಂ ಬೀಱಿದಪುದೆ ಮುಟ್ಟಿಗದ ಮಲರ್ ॥ 141 ॥

ಗುಣಿಗಳ ಹಿತವಚನದೆ ದು ।
ರ್ಗುಣಮನಣಂ ಮಾಣನೆಂದುಮಧಮಂ ಪೊನ್ನಂ ॥
ದಣದೊಳ್ ಕುಳ್ಳಿರಿಸಿದೊಡಂ ।
ಸೊಣಗಂ ಮಾಣ್ದಪುದೆ ಬಗುಳ್ವುದಂ ಕಿಱುರ್ಕುವುದಂ ॥ 142 ॥

ಜನನಿಯೊಳೊರ್ವಳೊಳೊಗೆದುಂ ।
ತನುಜರ್ ಬೇಱಪ್ಪರಱವೊಳಂ ಚರ್ಯೆಯೊಳಂ ॥
ವನಜಮುಮಾವಲುಮೊಂದೇ ।
ವನಜಾಕರದಲ್ಲಿ ಪುಟ್ಟಿಯುಂ ಭಿನ್ನಗುಣಂ ॥ 143 ॥

ಕಾನನದ ಜೊನ್ನದಂತೆವೊ ।
ಲಾನನಮಂ ತೆಱೆಯದಱದನಱವೆಸಕಂಬೋಲ್ ॥
ತಾನುಡದುಣ್ಣದೆ ಪಾತ್ರಕೆ ।
ದಾನಮನೊದರಿಸದೆ ಗಱಯಿಪರ್ಥಂ ವ್ಯರ್ಥಂ ॥ 144 ॥

ನೀಡುಂ ಕೇಡಂ ಮಾಡಲ್ ।
ಕೋಡದ ನಾಡೊಡೆಯನೆಡೆಯಿನೋಡದೆ ನಿಲ್ವಂ ॥
ಕೇಡಿಂಗೆಡೆಯಪ್ಪಂ ಫಣಿ ।
ಯಾಡಿಪ ಪೆಡೆಯಡಿಯೊಳಿರ್ಪ್ಪ ಮಂಡೂಕಂಬೋಲ್ ॥ 145 ॥

ಘನಮುಹಿಮರ್ ಸಜ್ಜನರಂ ।
ಮನವೊಲ್ದಿದಿರ್ಗೊಳ್ವರಧಮರಂ ಕಂಡುರಿವರ್ ॥
ವನಮಂ ಪಳಿಕುಗುಳ್ಗುಂ ಮೆ ।
ಲ್ಲನೊಪೆ ಕಲ್ಲಿಂಪ ಮೋದೆ ಕಿಡಿಯುಂ ಪಡೆಗುಂ ॥ 146 ॥

ಮೊಗಮಲರ್ದಂಬುಜಕೆಣೆ ನುಡಿ ।
ಮುಗಮುಗಿಸಿ ಕುಳಿರ್ವ ಚಂದನಕೆ ಪಾಸಟಿ ಮೇಣ್ ॥
ಬಗೆ ಬಜ್ಜರಕ್ಕೆ ತೊಣೆಯೆನೆ ।
ಬಗೆಗಾಗ್ಗಂ ಧೂರ್ತಸೃಷ್ಟಿ ಪಡೆಯದೆ ಬೆಗಡಂ ॥147॥

ದುರ್ಗುಣಸುಗುಣಂಗಳ್ ನೈ ।
ಸರ್ಗಿಕವಾಗಂತುಕಂಗಳಲ್ಲಂ ಜನರೊಳ್ ॥
ದುರ್ಗಂಧಮುಳ್ಳಿಯೊಳ್ ನೈ ।
ಸರ್ಗಿಕವೊರ್ದೆಗೊಳ್ವ ಕಂಪು ಸಿರಿಕಂಪದೊಳಂ ॥ 148 ॥

ಪರಿವ ಪ್ರೊನಲಂತೆ ಧಾರಾ ।
ಧರದಂತಿರೆ ಪಣ್ತ ಭೂಜದಂತಿರೆ ಸಂತರ್ ॥
ಪರಹಿತಮಂ ಗೆಯ್ವುದಱೊಳ್ ।
ನಿರತರ್ ಮುಯ್ಯಂ ನಿರೀಕ್ಷಿಸರ್ ಕನಸಿನೊಳಂ ॥ 149 ॥

ಸಿರಿಕಂಡಂ ಕತ್ತುರಿ ಕ ।
ಪ್ಪುರಮಿವಱಿಂದೆಸಗಿ ಕೆಸಱಿನದಱೊಳ್ ನಟ್ಟೋ ॥
ಸರಿಸದೆ ಪನ್ನೀರೆಱೆದುಂ ।
ಪರಿಮಳಮಂ ಪಡೆಯದುಳ್ಳಿ ಖಳನವಿನೀಯಂ ॥ 150 ॥

---

ರಸೆಯೊಳ್ ದುಷ್ಕುಲದಲ್ಲುದ ।
ಯಿಸಿದೊಡಮೇಂ ಪೂಜ್ಯರಾಗರೇ ತುಂಗಗುಣರ್ ॥
ಕೆಸಱೊಳ್ ಪುಟ್ಟಿದೊಡಂ ಸಾ ।
ರಸಮಿಂದಿರೆಯೊಲವಿನಿರ್ಪ ನೆಲೆವೀಡಲ್ತೇ ॥ 151 ॥

ಮೃದುಮಧುರಭಾಷಣಂ ಸಾ |
ಹೃದಮಂ ಪಡೆಗುಂ ಕಠೋರವಚನಂ ಪಗೆಯಂ ||
ಮುದಮಂ ಪಿಕದಿಂಚರಮೆರ್ದೆ |
ಗೊದವಿಕುಮುಱಲಂ ಕಟುಸ್ವರಂ ಗರ್ದಭದಾ || 152 ||

ಪಗೆಗಳ ಮಧ್ಯದೊಳಿರ್ದುಂ |
ಬಗೆಗುಂದದೆ ಜಾಣ್ಮೆಯಿಂದೆ ಬಾಳ್ವಂ ಚದುರಂ ||
ಅಗಿವ ರದಂಗಳ ಕೆಲದೊಳ್ |
ಸುಗಿಯದೆ ಸಂಚರಿಸಿ ರಸನೆಯಱಿಯದೆ ಸವಿಯಂ || 153 ||

ಆಸೆಗೆ ಕಿಂಕರನಾದಂ |
ದಾಸಂ ಜನಕೆಲ್ಲಮಾಸೆಯಂ ಧೃತಿಯಿಂದಂ ||
ದಾಸಿಯನೆಸಗಿದ ಮಹಿಮಾ |
ವಾಸನ ಪದದಡೆಯೊಳಖಿಳಜನಮುಂ ಕೆಡೆಗುಂ || 154 ||

ಏನಾನುಮೊಂದು ಕಜ್ಜಮು |
ನ್ನಾನಲ್ ತಱಿಸಲ್ಕೆ ಮುನ್ನಮಾರಯ್ಯದೆ ಮುಂ ||
ಸೂನುವನಹಿಯಿಂ ರಕ್ಷಿಸಿ ||
ದಾ ನಕುಲನನಱಿದನಂತಿರಱಿಲದಿರೆಂದುಂ || 155 ||

ಫಣಿಯುಂ ಖಳನುಂ ಗುಣದೊಳ್ |
ತೊಣೆಯೆಂಬರ್ ಪಿರಿಯರಾದೊಡಂ ಫಣಿ ಮಣಿಗುಂ |
ಮಣಿಮಂತ್ರಂಗಳ್ಗಂತೇಂ |
ಮಣಿಗುಮೆ ಖಳನೇನನಾರೊಡರ್ಚಿದೊಡಂ ಪೇೞ್ || 156 ||

ತಿಳಿಯದರೆಡೆಗೆಯ್ದಲೊಡಂ ।
ತಿಳಿದರ ತಿಳಿವಿಂಗೆ ಮೆಚ್ಚಿ ತಲೆದೂಗುವರಾರ್ ॥
ತಿಳಿಯುತೆ ಮಡಿವಳ್ಳನ ಕೌ ।
ಶಳಮಂ ಮನ್ನಿಸುವರಾರ್ ದಿಗಂಬರರೂರೊಳ್ ॥ 157 ॥

ತಪ್ಪದೆ ರೂಪಿನೊಳೋರಗೆ ।
ಯಪ್ಪೊಡಮಿರ್ವರ್ ಸಮಾನರಪ್ಪರೆ ಗುಣದೊಳ್ ॥
ಕಪ್ಪುರಕುಪ್ಪೇಂ ಪಾಸಟಿ ।
ಯಪ್ಪುದೆ ಕೋಗಿಲೆಗೆ ಕಾಗೆ ರನ್ನಕೆ ಕಾಚಂ ॥ 158 ॥

ಕಿಱಿದಂ ತಿಳಿದವರಾದಂ ।
ಜಱುಚುವರೆಂದುಂ ಮಿತಪ್ರಲಾಪಿಗಳಱಿದರ್ ॥
ಬಱಿದಾದ ಘಟಮೊ ನೀರಿಂ ।
ನೆಱೆದಿರ್ಪುದೊ ಪೇಟ ಮಿಡಿದೊಡುಲಿಗುಮಳುಂಬಂ ॥ 159 ॥

ಬತ್ತಿಯುಮೆಣ್ಣೆಯುಮಿರೆ ಸೊಡ ।
ರೆತ್ತಂ ಪಸರಿಸದೆ ಬೆಳಗನೇಂ ಪಲಸೊಡರಂ ॥
ಪೊತ್ತಿಸಿಕೊಳಲೀಯದೆ ಸಂ ।
ಪತ್ತಿರೆ ಪರಹಿತಮನೆಸಪುದಱಿದನ ಕೃತ್ಯಂ ॥ 160 ॥

ಪುಸಿಯಿಂ ನಿಕ್ಕುವಮಂ ಮಾ ।
ಮಸಕದ ಮುಳಿಸಿಂ ತಿತಿಕ್ಷೆಯಂ ಪಿಶುನತೆಯಿಂ ॥
ಜಸದೆಸಕಮನೆಂದುಂ ಗೆಲ ।
ಲಸದಳಮೆಂಬರ್ ವಿವೇಕದೀಪಿತಧಿಷಣರ್ ॥ 161 ॥

ತಾನೀಯದೆ ತನಿವಣ್ಣಂ ।
ನಾನಾಫಲಪಾದಪಕ್ಕೆ ವೃತಿಯಂ ಮುಳ್ಳಿಂ ॥
ದಾನಿಪ ಖರ್ಜೂರದವೋಲ್ ।
ತಾನುಂ ಕುಡನರ್ಥಮನನ್ಯರಂ ಕುಡಲೀಯಂ ॥ 162 ॥

ಮರಲಂ ನೋಯಿಸದಿನಿಸುಂ ।
ಮರಂದಮಂ ಪೀರ್ವ ಮಧುಕರಂಬೋಲ್ ದಾತಾ ॥
ರರ ಬಗೆಗೆ ನೋವನೆಸಗದೆ ।
ಪುರುಳಂ ನಯದಿಂದೆ ಪಡೆವುದೆರೆವರ ಧರ್ಮಂ ॥ 163 ॥

ಜಡಿದು ಪೊಡೆವರ್ಗೆ ಪುರುಳಂ ।
ಕುಡುವಂ ಕಾಲ್ವಿಡಿದು ಬೇಡುವರ್ಗೀನರ್ಥಮಂ ॥
ಕುಡುವನೆ ಕಬ್ಬಿಡಿಯಲೊಡಂ ।
ಕುಡುಗುಮೊ ಬೆರಲಿಂದೆ ಮಿಡಿಯೆ ಕುಡುಗುಮೊ ರಸಮಂ॥164॥

ಮನದೊಳಮೊಸಕದೊಳಂ ಮಾ ।
ತಿನೊಳಂ ಸತ್ಪುರುಷರೇಕರೂಪರಕಲುಷರ್ ॥
ಮನದೊಳ್ ನುಡಿಯೊಳ್ ಕಜ್ಜದೊ ।
ಳನೇಕರೂಪರ್ ದುರಾತ್ಮರಂತಶ್ಶುದ್ಧರ್ ॥ 165 ॥

ಒಡವೆರೆದ ಸಲಿಲಮುರಿಯಿಂ ।
ಕಿಡೆ ದುಗುಪದೆ ಬೀಬಿಲುರಿಯೊಳೆಯ್ದುತೆ ನೀರಿಂ ॥
ದೊಡಗೂಡಿ ಮತ್ತೆ ತನುಮಂ ।
ಪಡೆಗುಂ ಪಾಲ್ ಸಹಿಸರಾರ್ಯರಾಶ್ರಿತರಟಲಂ ॥ 166 ॥

ನೀಚನ ಪೊರೆಯಲ್ಲಿರ್ಪ ಸ ।
ದಾಚಾರನುಮನ್ನನೆಂದು ತಿಳಿಗುಂ ಲೋಕಂ ‖
ಈಚಲ ಕೆೞಗಿರ್ದುಂಡುವ ।
ರೋಚಕಮುಪ್ಪಮದುರ್ವಿಳಿಗೆ ಕಳ್ಳೆಸಿಸದೆ ಪೇೞ್ ‖ 167 ‖

ಜನಕಕಟ ಸತ್ಪದಾರ್ಥದೊ ।
ಳನಾದರಂ ದುಷ್ಟವಸ್ತುಗಳೊಳನುರಾಗಂ ‖
ಮನೆಮನೆಗೆ ಪೊತ್ತು ಸುತ್ತಿದೊ ।
ಡಿನಿವಾಲ್ ಬೆಲೆವಡೆಗುಮಿರ್ಪ ತಾಣದೊಳೇ ಕಳ್ ‖ 168 ‖

ನೆಱೆದಿರ್ಪ ಸಭೆಯೊಳಱಿದನ ।
ನಱಿಯದನಂ ತೋರ್ಪ ಕುಱಿಪು ಭೂಷಣಮಕ್ಕುಂ ‖
ಅಱಿಯಲ್ಕಾಗದೆ ಪೇೞ್ ಪಡಿ ।
ಯುಱಿವಕ್ಕಿಯನಂತೆ ಕಾಗೆಯುಂ ದನಿಯಿಂದಂ ‖ 169 ‖

ಉತ್ತಮನಿಂಗಿತಮಂ ತಿಳಿ ।
ದಿತ್ತಪನೆರೆವರ್ಗೆ ಮಧ್ಯಮಂ ಕೇಳಲೊಡಂ ‖
ಸುತ್ತಿಸಿ ಪಲಸೂಟಿಧಮಂ ।
ಸುತ್ತೆಯುಮಧಮಾಧಮಂ ಕುಡಂ ಗಡ ಪುರುಳಂ ‖ 170 ‖

ತಿರೆಯೊಳ್ ಸಂತಂ ಸೊಗಮಂ ।
ನರರ್ಗೆಂದುಂ ಮಾಳ್ಪಸಿರದೆ ಖಳನದವೞಲಂ ‖
ಸಿರಿಕಂಡದಿಂದೆ ಪೞುಪ್ಪಾಳ್ ।
ತರುಗಳ್ಗಾವೋದವೊಗೆಗುಮನಲಂ ಬಿದಿರಿಂ ‖ 171 ‖

---

ಸಿರಿಯಾರೊಳಮೊಂದುಂ ನೆಲ ||
ಸಿರದೆ ರಥಾಂಗಂಬೊಲುರುಳ್ದು ಪರಿವುದಱಿಂದಂ ||
ಕರಗತಮಾಗಿರ್ದರ್ಥಮ |
ನೆರವಿಲ್ಲದೆ ಪೆಱರ್ಗಮಿತ್ತು ಪಡೆವುದು ಸೊಗಮಂ || 172 ||

ರವಿ ಬಳ್ಳಮಪ್ಪಿನಂ ಮಾ |
ನವರಾಯುವನಳೆದು ನಿಚ್ಚಲುಂ ಜವನುಣ್ಬಂ ||
ಅವನಿಯೊಳಿರ್ಪನ್ನೆವರಂ |
ವಿವೇಕದಿಂ ಧರ್ಮಮೆಸಗಿ ಕಳೆವುದು ದಿನಮಂ || 173 ||

ಉಡದುಣ್ಣದೆ ಜಸಕೆಳಸದೆ |
ಬಡನಂಟರ ಸಂಕಟಂಗಳಂ ಕಳೆಯದೆ ಕಾ ||
ಪ್ಗಡೆಯೆ ಜನಮರ್ಥಮಂ ಬ |
ಯ್ತಿಡುವಂಗಂ ನಿರ್ಧನಂಗಮೇಂ ಗಡ ಭೇದಂ || 174 ||

ಉಡದುಣ್ಣದೆ ಕಡುದುಗುಡ |
ಕ್ಕಡೆಯಪ್ಪಂತೊಡಲನೆಸಗಿ ಶಾಶ್ವತಸುಖಮಂ ||
ಕುಡುವಱನನೊಡರಿಸದೆ ಸಂ |
ಗಡಿಸಿದ ಧನಮನ್ಯಭೋಗ್ಯಮಕ್ಕುಂ ಜೇನ್ವೋಲ್ || 175 ||

ಎಳೆಯರೆವಿಾಗಳ್ ಧರ್ಮಂ |
ಗಳನೆಸಪೆಂ ಮುದುಪರಾದೊಡೆಂಬರ್ ಗಾಂಪರ್ ||
ಫಳಗೊಪನಿ ಮಿಡಿಯುಮುದಿರ್ಗುಂ |
ಗಳ ಕಡುಪಿಱುಗಾಳಿ ..ೀಸೆ ಭೂರುಹದಿಂದಂ ||176 ||

ಇದೆ ನಿಂದನಿದೆ ಮಲಂಗಿದ ।
ನಿದೆ ಪೊಂದಿದನಟಿಲೆ ನಂಟರೆನಿಪುದಱಿಂ ಪು ॥
ಲ್ದುದಿನೀರ್ವನಿಗೆಣೆಯೊಡಲೆಂ ।
ಬುದನಱಿದು ವಿವೇಕಿ ತಳ್ವದೆಸಗುವುದಱನಂ ॥ 177 ॥

ಅಲೆಯನಾಡಿಸಿ ಕರ್ಬಿಂ ।
ಪಾಲೊಂದಿದರದಱ ಸಿಪ್ಪೆಯುರಿದೊಡೆ ಮೞಗರ್ ॥
ಕಾಲಂ ಬರ್ಪಂದಟಿಲರ್ ।
ಕಾಲದೊಳೊಡಲಿಂದವಾಪ್ಯಫಲವಂ ಪಡೆದರ್ ॥ 178 ॥

ಕಡುಕಿಱಿದೆನಿಪಾಲದ ಬಿ ।
ತ್ತೆಡೆಬಿಡದಾವರಿಸಿ ಬೆಳೆದು ನೆಟಲಂ ಕುಡುಗುಂ ॥
ಕಡುಕಿಱಿದಂ ತಕ್ಕಗ್ರ್ಗ ।
ತ್ತೊಡವೆಮುದಱ ಫಲಂ ವಿಹಾಯಮಂ ಪಸರಿಸುಗುಂ ॥ 179 ॥

ದೀಪದೆ ಮುರ್ಬೞವಂತಿರೆ ।
ಪಾಪಾಟೋಪಂ ಪ್ರಶಾಂತಮಕ್ಕುಂ ತಪದಿಂ ॥
ದೀಪಂ ಮುಸುಳೆಯಿರುಳ್ ತೋ ।
ರ್ಪಾ ಪರಿಯೊಳ್ ಸಯ್ಪು ಕುಂದೆ ಪಾಪಂ ತೋರ್ಕುಂ ॥ 180 ॥

ತಮ್ಮಂ ನೀಚರ್ ತೆಗೞ್ದೊಡೆ ।
ಸುಮ್ಮನೆ ಸೈರಿಪುದುಮಲ್ಲದಾಮುತ್ರಿಕದೊಳ್ ॥
ಸಮ್ಮನಿಕುಮುವಗ್ಗಳಿಲೆಂ ।
ದುಮ್ಮಳಿಪುದುಮುತ್ತಮಗ್ಗ್ರ ಸಹಜಗುಣಂಗಳ್ ॥ 181 ॥

ಕಿವಿ ತೊೞಲ್ ನಾಲಗೆ ಕಣ್ ಮೂ ।
ಗಿವರ್ಕ್ಕೆ ವಿಷಯಂಗಳಪ್ಪ ಪುಸಿಸೊಗಗಳೊಳ ॥
ೞ್ದುವ ಮನವನಾಳ್ದನೆಂದುಂ ।
ತವಿಲಿಲ್ಲದ ಸೊಗದ ಕಡಲೊಳೋಲಾಡನೆ ಪೇೞ್ ॥ 182 ॥

ಕಾಯುತೆ ನಿಡುನಾಲಗೆಯಂ ।
ಕಾಯದೆ ಬಾಯ್ದೆಱೆದುಸಿರ್ವ್ವ ಕಾಟ್ನುಡಿ ಕಿಡಿಕುಂ ॥
ಈಯಂಶಮನಱಿದಾರ್ಯರ್ ।
ಕಾಯರ್ ಕಾಯ್ಪಿಂದಿದಂದುಮಾರಂ ಬಯ್ಯರ್ ॥ 183 ॥

ಸುಗಿಯದೆ ತಮ್ಮಂ ನೀೞ್ಕರ್ ।
ತೆಗೞ್ದೊಡವರ್ಗ್ಗೆ ಬಗೆಯೊಳೊಗೆಯದು ಕೋಪಂ ॥
ತೆಗೞ್ದೆ ಪೆಱರ್ ಕನಲುತೆ ಕೀ ।
ೞುಗಿಬಗಿಯಾಗುತೆ ಕಱುತ್ತು ಕಲ್ಲಂ ಪಾಯ್ಗುಂ ॥ 184 ॥

ಸಂತರ್ ತಮ್ಮಂ ಮನವಂ ।
ದಂತು ಖಳರ್ ತಿಟ್ಟೆ ಮೂಗುವಟ್ಟಂತಿರ್ಪರ್ ॥
ದಂತಂ ಶರೀರದೊಳ್ ನಡು ।
ವಂತುಟು ನಾಯ್ ಕರ್ಚೆ ಮಗುೞ್ದು ಕರ್ಚುವರೊಳರೇ ॥ 185 ॥

ಬಡವನ ಚಾಗಮೆ ಚಾಗಂ ।
ಕಡುಗಲಿಯೆನಿಸಿದನ ಸೈರಣೆಯೆ ಸೈರಣೆ ಸಂ ॥
ಗಡಿಸಿದ ಸಿರಿಗಂ ಬಿಜ್ಜೆಗ ।
ಮೊಡೆಯೆನಿಸಿದರೆಡೆಯೊಳೆಸೆವ ವಿನಯಮೆ ವಿನಯಂ ॥ 186 ॥

ಚಿರಕಾಲಮಾದೊಡಂ ನೀ ।
ಚಿರ ಕಾಯ್ಯೀಗೆಯ್ದು ಮಾಱದಗ್ಗಲಿಕುಂ ಸ ॥
ತ್ಪುರುಷರ ಕನಲ್ಕೆ ಬಯಲ ।
ಲ್ಲರಿಸಿದ ಜನ್ನೀರ್ವ್ರೋಲಾಱದಪ್ಪುದು ಭೋಂಕಲ್ ॥ 187 ॥

ಕಲ್ಲಂ ಬೀಱುವವೋಲ್ ಕೀಱ್ ।
ಸೊಲ್ಲಿಪ ಕಡುಪ್ಪೊಲ್ಲ ಮಾತನಾಲಿಸಿದಾಗಳ್ ॥
ಸಲ್ಲಲಿತಗುಣರ್ ಕಿಸಿಸಿನಿ ।
ಸಿಲ್ಲದೆ ಸೈರಿಸುವರಮವು ಶಾಂತತೆಯೆಂತೋ ॥ 188 ॥

ಉಪಕೃತಿಯಂ ಸ್ಮರಿಸದೆ ತಮ ।
ಗಪಕೃತಿಯನೊಡರ್ಚ್ಚಿದರ್ಗ್ಗವೊಲವಿಂದಂ ಮ ॥
ತ್ತುಪಕೃತಿಯನೆಸಗಲೆಳಸುವ ।
ನೃಪುಂಗವರ್ಗ್ಗರೊ ಬರ್ಪರೊರೆಗಂ ದೊರೆಗಂ ॥ 189 ॥

ಅಱಿವುದನಱಿದಂಜುವುದ ।
ರ್ಕ್ಕಜ್ಜೆಯಂಜಿ ಮಹಾತ್ಮರೊಲ್ದು ತಲೆದೂಗುವಿನಂ ॥
ಮಱೆಯದೆ ಗೆಯ್ವುದುಮಂ ಗೆ ।
ಯ್ದುಱಿಕೆಱೆವಟ್ಟೆನಿಸಿದರ್ಗ್ಗೆ ದುಃಖಮುಮುಂಟೇ ॥ 190 ॥

ತಾಂ ಕೆಟ್ಟೊಡಮಾರ್ಯ್ಯರ್ ಪೆಱ ।
ರ್ಗೇಂ ಕೇಡೆಣಿಸುವರೆ ಪಸಿವಿನಿಟ್ಟೊಡಮೊಡಲೇಂ ॥
ಮಾಂಕರಿಪರೊಳ್ಬ್ಬರೆ ಧರೆ ।
ಯುಂ ಕೊಟ್ಟೊಡಮೇನಸತ್ಯಮಂ ನುಡಿವರೆ ಪೇಱ್ ॥ 191 ॥

ಕೆಳೆಯನೆರವಿಲ್ಲದಿರ್ವರ್ ।
ಬಳೆಯಿಸಿದ ಬೞಿಕ್ಕವೊರ್ವನೊಳ್ ತಪ್ಪುಗಳಂ ॥
ತಿಳಿದೊಡೆ ಸೈರಿಸುಗನ್ಯಂ ।
ಕಳೆಗಾಗದೊಡವನ ಕೆಳೆಯನಾಡದೆ ಪೆಱರೊಳ್ ॥192॥

ಊರೊಳ್ ಪಣ್ತುಱಗಿದ ಸಹ ।
ಕಾರಂಬೋಲ್ ಚಾಗಿಯಾರ್ಗವಿನಾವಂ ಮುಯ್ಯಂ ॥
ಪಾರದೆ ಸುಡುಗಾಡಿನ ಬ ।
ಬ್ಬೂರಂಬೋಲ್ ಕೃಪಣನೇನುಮಂ ಕುಡನಾರ್ಗಂ ॥ 193 ॥

ಬೇಡಲೊಡಂ ಕುಡುಬಡವರ್ ।
ನೀಡಿಲ್ಲದೆ ಕುಡುವುದಲ್ತೆ ಚಾಗಂ ಮುಗುಬ್ದಂ ॥
ನೀಡುವ ಧನಿಕರ್ಗೆಸಗಿದ ।
ಕೋಡೇಂ ಗಡ ಚಾಗಮೆನಿಕುಮೇ ಕಡನೆನಿಕುಂ ॥ 194 ॥

ತಕ್ಕರೊಳಂ ಮಿಕ್ಕರೊಳಂ ।
ನಿಕ್ಕುವವಾತ್ಮೀಯಗುಣವಿಪರ್ಯಯಮಿಲ್ಲಂ ॥
ಸಕ್ಕರೆಯಾರ್ಗಂ ಮಧುರಮೆ ।
ನಿಕ್ಕುಂ ಕಟುವಲ್ತೆ ಬೇವು ಬಿಡುಗಣ್ಣರ್ಗಂ ॥ 195 ॥

ಇಲ್ಲದ ಪುರುಳಂ ತನ್ನ ।
ಲ್ಲಿಲ್ಲೆಂಬುದು ದೋಷಮಲ್ತು ಲೋಕಕೆ ಸಾಜಂ ॥
ಸೊಲ್ಲಿಸಿ ಕುಡುವೆನೆನುತ್ತಕ ।
ಟಲ್ಲೆಂಬುದು ಕೇಳ್ ಕೃತಘ್ನತೆಗೆ ಮಿಗಿಲಕ್ಕುಂ ॥ 196 ॥

ಸಿರಿವಂತರೆನಿಸಿ ಬಾಬ್ವಂ ।
ದರರೆ ವಿಹಾಯದೆ ತೊಳಪ್ಪ ತಾರಗೆಗಳ ವೊ ॥
ಗ್ಗರದಂತಿರಸಂಖ್ಯರ್ ನಂ ।
ಟರೆಡರೊಳಾಬ್ವಿಂದು ಕೆಲರೆ ನಂಟರೆವೆಂಬರ್ ॥ 197 ॥

ಪುರುಷಾರ್ಥಾದಿತ್ರಯದೊಳ್ ।
ದೊರೆಕೊಳೆ ನಕ್ಷುವಣದು ಕೆಲದೊಳಿರ್ಪ್ಪವನೊಂದ ॥
ಲ್ಕರಿದಲ್ಲದಱಿಂದದನೋ ।
ಸರಿಸದೆ ಪಡೆ ಪಡೆಯದಿರ್ದೊಡೆಡೆ ದುಗುಡಕೆ ನೀಂ ॥ 198 ॥

ತುಱುಪ್ರೊಳ್ಳಿತಾದೊಪದಪ್ರೆಳ ।
ಗಱುವುಂ ಬೆಲೆವಡೆಗುಮಂತೆ ಸಿರಿವಂತಂ ಕ ॥
ಲ್ತಱಿಯದೊಡಮವನ ನುಡಿ ಜನ ।
ಕಱಿವಿನ ತಿರುಳೆನಿಕುಮೆಸೆವ ಕಿವಿದೊಡವೆನಿಕುಂ ॥ 199 ॥

ಅನವದ್ಯವಿದ್ಯರಾದೊಡ ।
ಮನುನಯಮುದಯಿಸದು ದುರ್ವಿನೀತರ ಬಗೆಯೊಳ್ ॥
ಜಿನಿಪಾಲ್ನಱುನೆಯ್ಗಳೊಳಡೆ ।
ಯಿನಿದಪ್ಪುದೆ ಪೇೞ ಕಯ್ಪೆಸೊರೆಯಿನಿಸಾನುಂ ॥ 200 ॥

ಕಡುಗಾಯ್ದ ನೆಲದೊಳುಬ್ಬಂ ।
ದೆಡೆವಡೆಯದೆ ಮೇಲೆಮೇಲೆ ಪರಿವುದು ಪೋತ್ರಂ ॥
ಬಡವನ ನುಡಿ ಮತ್ತರ ಮನ ।
ದೆಡೆಗೆಯ್ದುವುದಂತದಿರ್ಕೆ ಕಿವಿಗೆಯ್ದುವುದೇ ॥ 201 ॥

ಒಡಮೆಯೆನಿತಿರ್ದ್ದೊಡೇಂ ಬಿಡ ।
ದೊಡನೆಯ್ದುವುದೊಂದುಮಿಲ್ಲಮುಯ್ವಂದು ಜವಂ ॥
ಒಡವಂದು ಪೊರೆವ ಸುಕೃತಮು ।
ನೆಡೆಬಿಡದೆಸಗುಗೆ ವಿವೇಕಿಯದುಕಾರಣದಿಂ ॥ 202 ॥

ಇಳೆಯೊಳ್ ನಾನಾವರ್ಣ್ಣಂ ।
ಗಳಾದೊಡಂ ತುಱುಗಳವಱ ಪಾಲೊಂದೆ ತೆಱಂ ॥
ಕಳವಳಿಸಿ ಪಲವು ಮಾರ್ಗ್ಗಂ ।
ಗಳೊಳ್ ತೊೞಲ್ದ್ದೊಡಮವಾಪ್ಯವಸ್ತುವದೊಂದೇ ॥ 203 ॥

ಅಱಿದರ ಕೆಳೆ ಬೆಳ್ವಕ್ಕದ ।
ಪೆಱೆಯಂತಿರೆ ಬಳೆದು ಪೆರ್ಚ್ಚುಗುಂ ಪರಿವಿಡಿಯಿಂ ॥
ನೆಱೆ ಮೊದಲೊಳ್ ಬಳೆದು ಬಱಿ ।
ಕ್ಕಱೆಗುಂ ಖಳಮೈತ್ರಿ ಕೃಷ್ಣಪಕ್ಷದ ಬಿದುಪೋಲ್ ॥ 204 ॥

ಮನಕೆಱಲನುಂಟುಮಾಡುವ ।
ರನವದ್ಯರುಮಧಮಜನರ ಕೆಳೆತನದಿಂದಂ ॥
ಅನಲದ ಸಂಪರ್ಕ್ಕದೆ ತೊ ।
ಟ್ಟನೆ ಸುಡುಗುಂ ತಣ್ಣನಿರ್ಪ್ಪ ಬೆಣ್ಣೆಯುಮಿಳೆಯೊಳ್ ॥ 205 ॥

ಉಡೆಸೊಬಗುಮೊಡಲ ಸೊಬಗುಂ ।
ತುಡಿಗೆಯ ಸೊಬಗುಂ ವಿಚಾರಿಪೊಡೆ ಸೊಬಗಲ್ಲಂ ॥
ಎಡರೊಳಮಪಥದೊಳಡಿಯಿಡ ।
ಲೆಡೆಗುಡದೊಳ್ವಿಜ್ಜೆಸೊಬಗೆ ಸೊಬಗನವೇೞ್ಕುಂ ॥ 206 ॥

ಪಡೆಗುಂ ಸೊಗಮುಂ ಪೆಱರ್ಗೆ ।
ತೊತ್ತೊಡಮಿನಿಸುಂ ಕುಂದದಿರ್ಕುಮೊಡರಂ ಕಿಡಿಕುಂ ॥
ಪಡೆಗುಂ ಜಸಮುಂ ಬಿಜ್ಜೆವೊ ।
ಲಿಡಿದಱಿಯುಮೊಯುಂ ಪಡಲ್ವಡಿಪ ಮುದ್ದುಣಂಟೇ ॥ 207 ॥

ಇರಣದೊಳೊಗೆದುಂ ಲವಣಂ ।
ವರಮೆನಿಕುಂ ಕ್ಷೇತ್ರದಲ್ಲಿ ಬೆಳೆದಾ ನೆಲ್ಗಂ ॥
ಪಿರಿದುಂ ಕಲ್ತಱಿದವರಾ ।
ದರಣೀಯರ್ ಹೀನಕುಲದೊಳೊಗೆದೊಡಮಿಳೆಯೊಳ್ ॥208॥

ಕೋಳ್ವೋಗದು ಕುಂದದು ಬೆಸ ।
ಗೊಳ್ವಂಗಿತ್ತೊಡೆ ಕನಲ್ದು ನಾಡೊಡೆಯಂ ಕೆ ॥
ಯ್ಕೊಳ್ವೊಡೆ ಬಸಮಲ್ತಱಿಂ ।
ತಳ್ವದೆ ತನಯಂಗೆ ಬಿಜ್ಜೆಸಿರಿಯಾಗೆ ಪಿತಂ ॥ 209 ॥

ಆರಯೆ ವಿದ್ಯಾಪಾರಮ ।
ನಾರಯ್ದಲ್ ನೆಱೆವರದಱಿನಱಿದಂ ನೀರ ॥
ಕ್ಷೀರನ್ಯಾಯದೆ ಸಾರಾ ।
ಸಾರವಿಚಾರಮನೊಡರ್ಚೆ ಕಲ್ವುದು ಕಲೆಯಂ ॥ 210 ॥

ಓಡಂನಡೆಯಿಪನ ಕುಲಂ ।
ನೋಡದೆ ನದಿವಾಯ್ವರವನ ನೆರವಿಂದಱಿದರ್ ॥
ನೋಡದೆ ಕುಲಮುಂ ಬಿಜ್ಜೆಗೆ ।
ಬೀಡೆನಿಸುವರೆಡೆಯೊಳಱಿಗೆ ಕಲೆಗಳನೊಲವಿಂ ॥ 211 ॥

ಪ್ರತಿಭಾವಿಶೇಷದಿಂದಂ ।
ವಿತತಕಲಾಕೌಶಲಾತಿಶಯದಿಂದಂ ಶೋ ॥
ಭಿತರ ಸಹವಾಸದಿಂದಂ ।
ಶತಮುಖಪುರವಾಸಮೆಂತುಟಿಸಿದೋ ಕಾಣ್ಬಂ ॥ 212 ॥

ತುದಿಯಿಂ ಕರ್ಬಂ ಸವಿದಪ್ಪೊ ।
ಲೊದವುಗುವಾನಂದಪೂರಮಱಿದರ ಕೆಳೆಯಿಂ ॥
ಮೊದಲಿಂ ಸವಿದಂತೆಪ್ಪೊಲಱಿ ।
ಯದವರ ಕೆಳೆಯಿಂದೆ ನಲವು ಬರೆವರೆ ಸನೆಗುಂ ॥ 213 ॥

ಮಲ್ಲಿಗೆನಱುಮುಗುಳ್ಗಳ್ ತ ।
ನ್ನಲ್ಲಿರ್ಪುದಱಿಂದೆ ಕಮ್ಮಿತಪ್ಪುದು ನೀರುಂ ॥
ಕಲ್ಲದರುಂ ಕಲ್ತವರೆಡೆ ।
ಯಲ್ಲಿರ್ಪಿನಮಱಿವು ಕೂಡೆ ತಲೆದೋಱದೆ ಪೇೞ್ ॥ 214 ॥

ಧೀರತೆಯುನ್ನತಿಕೆ ಸದಾ ।
ಚಾರಮಿವಭಿಜಾತರಲ್ಲಿ ನೆಲಸಿರ್ಪುವವೇ ॥
ನಾರಯೆ ಖಲರುನ್ನತಪದ ।
ಕಾರೋಹಿಸಿದೊಡಮವಂದಿರೊಳ್ ಪುಟ್ಟುಗುಮೇ ॥ 215 ॥

ಸದಮಲರೆಯ್ತರೆಯಿದಿರೇ ।
ಳ್ವುದುಮಿದಿರ್ಗೊಳ್ವುದುಮೊಱಲ್ದು ಸವಿವಾತಿಂದಂ ॥
ಪದುಳಂಬೆಸಗೊಳ್ವುದುಮೊದ ।
ವಿದ ಮುದದಿಂದುಪಚರಿಪ್ಪುದುಂ ಕುಲಜಗುಣಂ ॥ 216 ॥

ಮನದೊಳ್ ನುಡಿಯೊಳ್ ಕಜ್ಜದೊ ।
ಳೆನಿಸಾನುಂ ವೈಪರೀತ್ಯಮಿಲ್ಲದೆ ಕರುಣಾ ॥
ವನನಿಧಿಗಳೆನಿಸಿ ಬಾಳ್ವುದು ।
ಗನಹಗ್ಗ‌ಲ್ಲದೆ ಪೆಱಗ್ಗ ನೋೞ್ಪೊಡೆ ಮೊಗ್ಗೆ ॥ 217 ॥

ಸಿರಿ ತವುಗಿರೆಯುಂ ಗೆಯ್ವರ್ ।
ದರಿದ್ರರಪ್ಪಾರ್ಯರೆಸಪ ಕಜ್ಜಮನಥಮರ್ ॥
ಎರಳೆಗೆ ಪಲ್ಲಣಮಿರೆಯುಂ ।
ತುರಗದವೋಲ್ ಪೊಣರ್ವ ಕಲಿಗೆ ನೆರವಪ್ಪುದೆ ಪೇೞ್॥218॥

ದೆಸೆಗೆಲ್ಲಂ ಬೆಳ್ವಳಗಂ ।
ಪಸರಿಪ ಸಸಿಗೆಣೆ ಮಹಾಂತರೆನ್ನುಂ ಲೋಕಂ ॥
ಮಸಗುವ ಕಱೆಯಂ ಸಸಿ ಸೈ ।
ರಿಸುಗುಂ ಸೈರಿಸದೆ ಕಂದಿ ತವರೆ ಮಹಾಂತರ್ ॥ 219 ॥

ಪಿರಿಯರೊಳೆರೆವಂದಿಲ್ಲೆನೆ ।
ವರಮದು ನೀಚರೊಳಭೀಷ್ಟಮಂ ಪಡೆವುದಱಿಂ ॥
ನರಿಯೆರ್ದೆಯನುರ್ಚಿದಂಬಿಂ ।
ವರಮೆನಿಸುಗುಮಲ್ತೆ ಹರಿಯನಿಸೆ ತಪ್ಪಿದ ಕೋಲ್ ॥ 220 ॥

ಅಕ್ಕರಗುರುಡರ ಸಭೆಯಂ ।
ಪೊಕ್ಕಱಿಯದನೊರೆವಸಂಗತಪ್ರಲಪಿತಮಂ ॥
ತಕ್ಕರಱಿಲ್ದುಂ ಕೇಳ್ವರ್ ।
ನಕ್ಕಪರಿವನಂ ಪಲಂಬರೆನುತುಂ ದಯೆಯಿಂ ॥ 221 ॥

ನುಡಿದು ಬಿಱುನುಡಿಯನಧಮರ್ ।
ಜಡಿದಟ್ಟಲಿಪ್ಪೊಡಂ ಮಹಾಂತರಿನಿನುಡಿನುಡಿವರ್ ॥
ಕಡಿನುಡಿದಿಡಿದರೆದೊಡಮೇಂ ।
ಕುಡದಿಕ್ಕುರ್ವೆ ಪೇೞಿ ಕಬ್ಬು ಮಧುತಮರಸಮಂ ॥ 222 ॥

ಕಳ್ವೊಣ್ಬುದು ಕಳ್ವುದು ಬಗೆ ।
ತಳ್ವಂಕಂಗೊಳ್ವ ತೆಱಿನೆ ತೆಗೞ್ವುದು ಸಟೆಯಂ ॥
ಎಳ್ಳನಿತುಮಳ್ಕದೊರೆವುದು ।
ವೊಳ್ಳಿದರಲ್ಲಿಲ್ಲ ನೀಚಜನಕಿವು ಸಾಜಂ ॥ 223 ॥

ಪರರಂ ತೆಗೞ್ವುದಱೊಳ್ ಮೂ ।
ಕರಸ್ವವನಿತೆಯರನೀಕ್ಷಿಪುದಱೊಳ್ ಕುರುಡರ್ ॥
ಪರಗುಹ್ಯಶ್ರವಣದೊಳೀ ।
ಡರಪ್ಪ ನರರ್ಗೇಕೆ ಬೇಱೆ ಧರ್ಮಾಚರಣಂ ॥ 224 ॥

ತಾನಿರ್ಪೆಡೆಗೆಯ್ತರ್ಪರ ।
ನೇನಾನುಂ ಬೇೞ್ಪರೆಂಬ ಭಯದಿಂ ಜಱೆವಂ ॥
ಹೀನಕುಲಜಾತನುತ್ತಮ ।
ನಾನಂದದೆ ಕೇಳ್ದು ಪದುಳಮಂ ನೆರವಪ್ಪಂ ॥ 225 ॥

ಸಿರಿವಂತರೆಂದು ನೀಚರ ।
ಪೊರೆಯೊಳ್ ಪಣದಾಸೆಯಿಂದೆ ಸೇರ್ವರ್ ಪಲಬರ್ ॥
ಪಿರಿಯರೊಳಾಶ್ರಯಮಿಹಕಂ ।
ಪರತ್ರೆಗಂ ಸುಖಮನೆಸಪುದೆಂಬುದನಱಿಯರ್ ॥ 226 ॥

ಪೊನ್ನುಂ ದೊರೆಕೊಳಿಸದ ಮಹಿ ।
ಮೋನ್ನತತರಶ್ರಮದೆ ತಮ್ಮ ಬಟಿಗೆಯ್ದಿದೊಡಂ ॥
ಮನ್ನಿಸಿ ಪಡೆವೆಂ ಜ್ಞಾನಮ ।
ನೆನ್ನದೆ ಮೂಢರ್ಕಳಕಟ ಪೊಟ್ಟಂ ಕಳೆವರ್ ॥ 227 ॥

ಪಿರಿಯರೆವಾವೆಮ್ಮಂ ಪೋ ।
ಲ್ವರಿಲ್ಲ ಪೊಡವಿಯೊಳೆನುತ್ತೆ ಬೆಡಗುವುದು ತಿಳಿವೇ ॥
ಪರಿಕಿಸಿ ತಮ್ಮಱಿವುಮೊಯಂ ।
ಪರಿತಾಪದೆ ತಲೆಯನೆಱಗಿಪುದು ತಿಳಿವೆನಿಕುಂ ॥ 2:8 ॥

ಮುಂಬಗಲ ನೆಟಲವೊಲ್ ದುಱ ।
ದುಂಬಿಗಳೊಳ್ ಮಾಟ್ಪ ಮೈತ್ರಿ ಕುಂದುಗುಮೊಂದುಂ ॥
ಪಿಂಬಗಲ ನೆಟಲವೊಲ್ ಸುಗು ।
ಣಾಂಬುಧಿಗಳೊಳಾದ ಮೈತ್ರಿ ಬಳೆಗುಮಳುಂಬಂ ॥ 229 ॥

ಪಿರಿಯರ್ಗೆ ಪೆರ್ಮೆ ನಮ್ರತೆ ।
ಸಿರಿವಂತರ್ಗಾರ್ತಮಿತ್ರಬಾಂಧವರೆಡರಂ ॥
ಪರಿಹರಿಪುದು ಪೆರ್ಮೆ ಕಲಾ ।
ಪರಿಣತರೆನಿಪರ್ಗೆ ಪೆರ್ಮೆ ವಿನಯಾತಿಶಯಂ ॥ 230 ॥

ಪಿರಿಯರ ಸೇವೆಯನೆಸಗದ ।
ಪರೋಪಕಾರಮನೊಡರ್ಚದಱಿವನೆಣಂ ಬಿ ॥
ತ್ತರಿಸದ ದಿವಸಂಗಳನಾ ।
ರ್ಯರಾಯುವೊಳ್ ನಿಷ್ಫಲಂ ದಲೆಂದೆಣಿಸಿದಪರ್ ॥ 231 ॥

ಬಿಸಿಲಳುರೆ ಪುಲ್ಲ ತುದಿಯೊಳ್ ।
ಪೊಸಮುತ್ತಿನ ತೆಱದೊಳೆಸೆವ ಪನಿಯುಣಿವವೊಲಾ ॥
ರ್ಯಸವಾಗಮದಿಂದಂ ನೀ ।
ಚಸಂಗದಿಂ ಮುನ್ನ ಮೊಗೆದ ದುರ್ಗುಣಮೞಿಗುಂ ॥ 232 ॥

ಬಚ್ಚಲ ನೀರುಂ ಪರಿಯುತೆ ।
ಪೊಚ್ಚದ ಪೊನಲೊಡನೆ ಬೆರೆದು ತೀರ್ಥಮೆನಿಕ್ಕುಂ ॥
ಸಚ್ಚರಿತರ ಸಹವಾಸದಿ ।
ನೆಚ್ಚರಿಯೇ ನೀಚರುಚ್ಚಗುಣಗಪ್ಪುದು ಪೇೞ್ 233 ॥

ಅಱಿಯಿಂ ಧರ್ಮದ ಮಾರ್ಗಮು ।
ನಿಱಿಯಿಂ ವಂಚನೆಯನಱಿಯದರ ಬಿಱುನುಡಿಯಿಂ ॥
ಮಱುಗದಿರಿಮಾರ್ಯಮಂಡಲಿ ।
ಗೆಱಗಿಂ ಬೆಱೆಯದಿರಿಮುಱಿಯಿಮಧಮರ ಕೆಳೆಯಂ ॥ 234 ॥

ಇಳೆಯೊಳ್ ಜನನಂ ಮನಕು ।
ವ್ಮಳಮಂ ಕಳವಳಮನುಂಟುಮಾಳ್ಪದೆ ನರರೊಳ್ ॥
ಕೆಳೆತನಮಳವಡುವೊಡೆ ನಿ ।
ಷ್ಕಳಂಕಚರಿತರೊಳುದಾತ್ತಗುಣರೊಳ್ ಬುಧರೊಳ್ ॥ 235 ॥

ಒಡವೆರೆವರಿಂದಗಲ್ಕೆಯು ।
ಮಡಸುವ ಕುತ್ತಮುಮಕಾಲಮರಣಮುಮೆನ್ನಂ ॥
ನಡುಗಿಪುವವಱಿಂದೆರ್ದೆಯೋ ।
ತಡೆಯದೆ ಸತ್ಪುರುಷರಲ್ಲಿ ಬೆಚ್ಚವೊಲಿರು ನೀಂ ॥ 236 ॥

ಸೊದೆಯಿಂ ಬಾನಂ ಬಾಸಣಿ ।
ಸಿದ ತೆಱದಿಂ ಬೆಳಗುವವಮರ್ದುಗದಿರನೊಳೊಡಗೂ ॥
ಡಿದ ಕತದಿಂ ಸೇವ್ಯಮೆನಿ ।
ಪ್ಪುದು ಕಂದುಂ ಪಿರಿಯರಾಶ್ರಯಂ ಕೇವಳಮೋ ॥ 237 ॥

ಕೀರದೊಳೊಡವೆರೆಯಲೊಡಂ ।
ನೀರಕೆ ಕೀರದ ಗುಣಂಗಳೊಗೆವಂತೊಲಲ್ಪರ್ ॥
ನೇರಿದರಾಶ್ರಯಮಂ ಗೆಯೆ ।
ನೇರಿದುವಾಗವೆ ಗುಣಂಗಳನಿಸಾನುಂ ಪೇೞ್ ॥ 238 ॥

ವಿತತಗುಣರ್ ಸುಜನರನೊಂ ।
ದುತೆ ಸತ್‌ಕ್ಷೇತ್ರದೊಳೆ ನಟ್ಟ ನೆಲ್ವೋಲಲರ್ವರ್ ॥
ಇತರರ ಸಂಗಮದಿಂದಂ ।
ಪ್ರತೀಪವಾತದೆ ಪಡಂಗುವೋಲ್ ಪೆಱಸಾರ್ವರ್ ॥ 239 ॥

ಅಣುಮಾತ್ರದೋಷಮುಂ ಗಿರಿ ।
ಗೆಣೆಯೆನೆ ತೋರ್ಕುಂ ಮಹಾಂತರಲ್ಲಿರಲತ್ಯ ॥
ಲ್ಪಣಮೆನಿಪ್ಪೊಡಮದು ಖಳರೊಳ್ ।
ಗಣಿಯಿಪರಾರ್ ದೋಷಕಣಗಳನೆಡೆಗುಡರಾರ್ಯರ್ ॥ 240 ॥

ತಿಳಿವಣಮಿಲ್ಲದ ಮೂಢ ।
ರ್ಕಳಲ್ಲಿ ಕಟ್ಟಟ್ಟಿಕೆಱಿಂದೆ ಬಳೆಯಿಪ ಕೆಳೆಯಿಂ ।
ತಿಳಿವಿಂ ಪಜ್ಜಳಿಪಮಳ ।
ರ್ಕಳಲ್ಲಿ ಕಡುಮುಳಿದು ಗೆಯ್ವ ಕಾಳೆಗಮೆ ವರಂ ॥ 241 ॥

ಕೊಂಡೆಯದಿಂದಂ ಚಿತ್ತವು ।
ನಂಡಲೆದು ದುರಾತ್ಮರಪಥಕುಯ್ವಂದು ಧರಾ ॥
ಮಂಡಲಮಂಡನರೆನಿಸುವ ।
ಪಂಡಿತರಾರಯ್ಯದವರ್ಗೆ ಬಸಮಪ್ಪರೆ ಪೇಲ್ ॥ 242 ॥

ನೆಱೆ ನೀರಂ ಕೊಳ್ಳದ ಕಿಱು ।
ಗೆಱೆಯಡಿಯುಣ ಕೆಯ್ಯ ಬೆಳಸಿನಂತಿರೆ ಕಿಡುವಂ ॥
ಪೆಱರಾಶ್ರಯದಿನೆ ಬಾಳ್ವಂ ।
ತೊಱೆಯುತ್ತಲಸಿಕೆಯನುಜ್ಜುಗಿಪನೆಡರಱೆಯುಂ ॥ 243 ॥

ಜನಿಯಿಸಿದೊಡೇನೊ ಸಂದಭಿ ।
ಜನದೊಳ್ ಕ್ರಿಯೆಯಿನೆ ನರಂಗೆ ಗೌರವಮೊಗೆಗುಂ ॥
ತನಿಗರ್ಬಿಂದೊಗೆದೊಡಮೇ ।
ನಿನಿಗಂಪನಿಸಾನುಮುಂಟೆ ಸೂಲಂಗಿಗೆ ಪೇಲ್ ॥ 244 ॥

ಪಲಸೂಟುಜ್ಜುಗಿಸ-ತೆ ಪಂ ।
ಬಲಿಸುತ್ತರಿದೆನಿಪ ಕಜ್ಜಮಂ ಗೆಯ್ದು ಧರಾ ॥
ವಲಯದೊಳೊಳ್ಜಸಮಂ ನಿಱೆ ।
ಸಲಾರ್ಪರೇ ಪೇಟ ಧೀರರಲ್ಲದ ಮನುಜರ್ ॥ 245 ॥

ಪೆಱರೆಡೆಯನೆಯ್ದಿ ನಾಣಂ ।
ತೊಱೆದನುದಿನಮುಕಟ ಬೇಡಿ ಬಾಳ್ವರ್ ನೀಚರ್ ॥
ಕಱೆಗುಂ ಕಾಮಿತಮನಿದೆಂ ।
ದಱೆದುದ್ಯಮಮಂ ಮನಸ್ವಿಗಳ್ ಮಾಣರಣಂ ॥ 246 ॥

ತನ್ನುದ್ಯಮಬಲದಿನೆ ನರ ।
ನುನ್ನತಿಯಂ ಪಡೆಯಲಕ್ಕುಮೆಂಬುದು ನಿಸದಂ ॥
ಬಿನ್ನನೆ ಕುಳ್ಳಿರ್ದನ ಬಾ ।
ಯ್ಗಿನ್ನುಣಿಸೇಂ ಮೇಗಣಿಂದೆ ಬೀೞ್ಗುಮೆ ಭೋಂಕಲ್ ॥217॥

ಜನಕಂ ಕುರ್ಗೆದ ಸಮಯದೆ ।
ತನಯಂ ನಲವಿಂ ಸಹಾಯನಪ್ಪುದು ಪಿರಿದೇ ॥
ತಿನೆ ಬೇರಂ ಗೆದಲಾಲಮು ।
ವನೀತಲಕ್ಕೊಲೆಯದಂತು ತಳೆಯದೆ ಬೀೞಲ್ ॥ 218 ॥

ಜನಮೇಕೆ ಬಱಿದೆ ದುಷ್ಕುಲ ।
ಮನವದ್ಯಕುಲಂ ಗಡೆಂದು ನುಡಿವುದೊ ಕಾಣೆಂ ॥
ಧನಮುಂ ತಪಮುಂ ಕಲ್ವಿಯು ।
ಮನವರತೋದ್ಯಮಮುಮುಂಟುಮಾಡವೆ ಕುಲಮಂ ॥ 249 ॥

ಪಸಿದರ್ಗೆನಿವಣ್ಣಂ ಕಡು ।
ವಿಸಿಲಿಂ ಬಸವಱಿದವರ್ಗೆ ತಣ್ಣೆೞಲಂ ಕೊ ॥
ಟ್ಟಸುವೀವ ಮರಂಬೋಲ್ ಸಂ ।
ತಸದಿಂ ಪರಹಿತಮನೆಸಗಿ ಬಾೞ್ವರುದಾರರ್ ॥ 250 ॥

ಅಸದಳಮುಪ್ಪೞಲಂ ಜನ ।
ಮಸುಸಮರಂ ಕಂಡು ಮಱೆಗುಪೇಕ್ಷಿಸಿ ಸಿಸುವಂ ॥
ಪ್ರಸವದ ವೇದನೆಯಂ ಮಱೆ ।
ದು ಸಂತಸಂದಾಳ್ವ ಜನನಿಯಂತಿರೆ ತಿರೆಯೊಳ್ ॥ 251 ॥

ತನಿವಣ್ಕಾಯ್ವಿಡಿಪೂಗಳ್ |
ತನತ್ತು ಶಾಖೋಪಶಾಖೆಗಳೊಳಿಡಿದಿರೆಯುಂ ||
ಕುನಿಗುಮೆ ಭಾರದೆ ಭೂಜಂ |
ಘನಮಹಿಮರ್ಗ್ಗಾಶ್ರಿತಾಳಿಭರಣಮೆ ಭರಣಂ || 252 ||

ಸ್ತ್ರೀಯರಿವಂದಿರ್ ಮೇಣ್ ಪರ |
ಕೀಯರಿವಂದಿರ್ ಸಖಾಯರಿವರಿವರರಿಗಳ್ ||
ಜ್ಯಾಯರ್ ಕನೀಯರೆನ್ನದ |
ಪಾಯದೊಳಾರ್ಗ್ಗಂ ಸಹಾಯರಪ್ಪರುದಾರರ್ || 253 ||

ಅಸುಸಮಮಿತ್ರರ್ ಕುಡಿತೆಯೊ |
ಳೊಸೆದಿಟ್ಟ ಕದನ್ನದಂತಿರಾಗದರೆಡೆಯೊಳ್ ||
ಮಿಸುನಿಯ ಬಟ್ಟಲೊಳಮರ್ದಿಂ |
ಗೆ ಸಮಾನಮೆನಿಪ್ಪ ಬೋನಮೇಂ ಸೊಗಯಿಕುಮೋ || 254 ||

ಸಿರಿಯಿರ್ಪಂದಿಕ್ಕುಟದಂ |
ತಿರೆ ಬೆಂಬಟೆವಿಡಿದು ತಂಡಸಂಬೋಲೆಡರೊಳ್ ||
ಸರಿವರ್ ಕೆಳೆಯರೆ ಮೂಸೆವೊ |
ಲುರಿಯೊಳಮೊಡನಿರ್ದು ಬೇವರಾರಯೆ ಕೆಳೆಯರ್ || 255 ||

ಕೆಳೆಯರ್ ಜನ್ಮಾಂತರದೊಳ್ |
ಕೆಳೆಯರ್ಗ್ಗಪಕ್ಷತಿಯನೆಸಪ್ಪುದೇನುಂಟು ಸುಖಂ ||
ಗಳೊಳಂ ದುಃಖಂಗಳೊಳಂ |
ತಳರದೆ ಸಮವೃತ್ತಿಯುಳ್ಳರಾಗದೊಡಿಹದೊಳ್ || 256 ||

ಹೃದಯಮನೆಡೆಬಿಡದಟಲಿಸು ।
ವುದಱಿಂದಂ ಲೇಸು ಕೊಲ್ವುದೊರ್ಮೆಯೆ ಗುಣಮಿ ॥
ಲ್ಲದನೊಳ್ ಗುಣಗಣಮುಂಟೆಂ ।
ಬುದಱಿಂದಂ ಲೇಸು ಬಯ್ವುದೆಂಬರ್ ತಿಳಿದರ್ ॥ 257 ॥

ಮೊದಲಲದುರ್ ಬಟೆಕ್ಕಂ ಮುಗು ।
ಳದ ಮರವೂವಂತಿರೇಕವಿಧಮುಪ್ಪುದೆ ಸೌ ॥
ಹೃದಮೆನಿಕುಂ ನೀವೂರ್ವೋಲ್ ।
ಮೊದಲಲದುರ್ ಬಟೆಕ್ಕೆ ಮುಗುಳ್ಪುದೇಂ ಕಳೆತನಮೋ ॥258॥

ಖಲರೆಡೆಯೊಳ್ ಸತ್ಪುರುಷರ್ ।
ನೆಲಸಿದೊಡಂ ವಿಕೃತಿವಡೆಯುವವರ ಗುಣಂಗಳ್ ॥
ಪಲವುಂ ಬೇವುಗಳೆಡೆಯೊಳ್ ।
ನೆಲಸಿದೊಡಂ ಮಧುರಫಲಮನೀಯದೆ ಚೂತಂ ॥ 259 ॥

ಆಗದನ ಹರ್ಮ್ಯದೊಳ್ ಪಡೆ ।
ದೋಗರಮಮೃತೋಪಮಾನಮಾದೊಡಮದು ನೋ ॥
ಳ್ಪಾಗಳ್ ಸನ್ಮಿತ್ರರ ಪ ।
ಕ್ಕಾರ್ಗಾರದೆ ಲವಣಮಿಲ್ಲದಂಬಿಲಕೆಣೆಯೋ ॥ 260 ॥

ಕಾಣದರುಂ ಕೇಳದರುಂ ।
ಮಾಣದೆ ಸಿರಿವಂತನೆಡೆಗೆ ನಂಟರೆವೆನುತುಂ ॥
ಪೂಣುತೆ ಪೋಗುವರರ್ಥಂ ।
ಕ್ಷೀಣತೆವೆತ್ತಂದು ಕಾಣೆವೀತನನೆಂಬರ್ ॥ 261 ॥

ಕರಿಯಂನ್ನರ ಕೆಳೆಯುಂ ಪರಿ ।
ಹರಿಸುತೆ ನಾಯನ್ನರಲ್ಲಿ ಪಡೆವುದು ಕೆಳೆಯುಂ ॥
ಕರಿ ಮಾವಟಿಗನುಮಂ ಸಂ ।
ಹರಿಕುಂ ನಾಯಿಱಿಯೆ ಬಾಲಮಲ್ಲಾಡಿಸುಗುಂ ॥ 262 ॥

ಕೆಳೆಯೇವುದಾವಗಂ ಕೆಲ ।
ದೊಳಿರ್ದುಮಿನಿಸುಂ ಸಹಾಯರಾಗದರೊಳ್ ಕೆ ॥
ಯ್ವೆಳೆಯಿಪ ಪರಿಕಾಲನ್ನರ ।
ಕೆಳೆಯುಂ ದೂರಕ್ಕೆ ಸಂದುಮೊಂದಲ್ವೇೞ್ಕುಂ ॥ 263 ॥

ಪನೆಗುತ್ತಮರ್ಕ್ಕಳಿಣ್ಣೆ ಕೆಳೆ ।
ತನದೊಳ್ ತೆಂಗಿಂಗೆ ಮಧ್ಯಮರ್ಕ್ಕಳ್ ತೊಣ್ಣೆ ನೋ ॥
ಱ್ಪನಮಧಮರ್ಕ್ಕಳ್ ಕೌಂಗಿಂ ।
ಗೆನಸುಂ ಪಾಸಟಿಯೆನುತ್ತೆ ಪಿರಿಯರ್ ಪೇೞ್ವರ್ ॥ 264 ॥

ಕೆಳೆಯರೊಳಿನಿಸಗುಣಂ ದೊರೆ ।
ಕೊಳೆ ಕೆಳೆಯುಂ ಕಳೆಯಮೇಡ ನೊರೆ ನೀರ್ಗೆ ತುಷಂ ॥
ಕಳಮಕೆ ಪೊಱಎಸಟಿಲಗುರ್ಂ ।
ಟೊಳವೇ ಪೇೞ್ ದೋಷರಹಿತವಸ್ತುಗಳೆಳೆಯೊಳ್ ॥ 265 ॥

ಲಲಿತಗುಣರೆಂದು ಭಾವಿಸಿ ।
ನಲವಿಂ ಕೆಳೆಗೊಂಡರನ್ಯಥಾಗುಣರಾದಂ ॥
ದೊಲವಟೆದು ಹೃದಯಮುಗ್ರ ।
ಜ್ವಲನದೆ ಬಿಟ್ಟುಟ್ಟಿದಂತೆ ಕರಿಮುರಿವೋಕುಂ ॥ 266 ॥

ಪತ್ತುವಿಡಲಾಗದರ್ ತಮ |
ಗತ್ತಳಗಂ ಕೇಡನೆಸಪ್ಪೊಡಂ ಸೈರಿಸರಾರ್ ||
ಕುತ್ತಿತ್ತು ಕಣ್ಣನೆಂದೇಂ |
ತತ್ತಱದಱಿವರೆ ಕಱುತ್ತು ಕೆಯ್ಯಂ ಮನುಜರ್ || 267 ||

ಕೆಳೆಯರೊಳಿರೆ ದೋಷಂಗಳ್ |
ಮುಳಿಯದೆ ಸೈರಿಸುತೆ ಬುದ್ಧಿವೇೞ್ ಕೆಳೆತನಮಂ ||
ಕಳೆಯದಿರೊರ್ವರ ಸೈರಣೆ |
ಬಳೆಯಿಕುಮಿರ್ವರೊಳಮರ್ದ್ದ ಕೆಳೆಯನಳುಂಬಂ || 268 ||

ಸರಸಕಲಾತತಿನಿಷ್ಣಾ |
ತರ ಸರಸವಚೋವಿಲಾಸದಿಂದೊಗೆವ ಸುಖಂ ||
ಸುರಲೋಕಸುಖಂ ಮೂಢರ |
ವಿರಸಪ್ರಲಪಿತದಿನೊಗೆವಱಲೆ ನರಕದಱಲ್ || 269 ||

ಖಳರೊಳೊಡರಿಸಿದ ಕೆಳೆ ಪೊದ |
ಲೊಳೆ ನೆಲ್ವುಲ್ಲಲ್ಲಿ ಬಿಟ್ದ ಕಿಡಿವೊಲಳುಂಬಂ ||
ಬಳೆದಾಗಳೆ ಕಿಡುಗುಂ ನಿ |
ರ್ಮಳರೊಳ್ ಕೆಳೆ ಪೊಳೆಯ ತೆಱದೆ ಬರೆವರೆ ಬಳೆಗುಂ || 270 ||

ಮುಗಮುಗಿಪಾವಿನ ನೆಯ್ಯಂ |
ಮೊಗೆಯಿಂದಂ ಸುರಿದು ಬೇವಿನೆಣ್ಣೆಯನದಱೊಳ್ ||
ಮುಗುೞ್ತೆ ಸುರಿವಗ್ಗ ಪಾಸಟಿ |
ಸುಗುಣರ ಕೆಳೆಯುೞಿದು ಖಳರ ಕೆಳೆಗಾಟಿಸುವರ್ || 271 ||

ಅದವಟ್ಟಿಲುದಯಿಪುದರಿದ ।
ಲ್ತೊದವಿದ ಮುದದಿಂದೆ ಗೆಯ್ಯವೇಡಿದುದಂ ಗೆ ॥
ಯ್ಯದೆ ಮದದಿಂ ಗೆಯ್ಯಲ್ಬಾ ।
ರದುದಂ ಗೆಯ್ಯಲ್ಕೆ ಪೂಣ್ಬ ಮನುಜಂಗಿಳೆಯೊಳ್ ॥ 272 ॥

ಅಳವಟ್ಟಿದ ಪಗೆವರೊಳ್ ತ ।
ನ್ನಳವಂ ತೋಱಲ್ಕೆ ಮುಂದುವರಿಯರ್ ಕಲಿಗಳ್ ॥
ಎಳವೆಱೆಯಂ ನುಂಗಲ್ಕೇಂ ।
ಮುಳಿಸಿಂದೆಯ್ದುಗುಮೆ ರಾಹು ಗಗನಾಂಗಣದೊಳ್ ॥ 273 ॥

ಪೊಡವಿಯೊಳೆಲ್ಲಗ್ಗಳಂ ನ ।
ಲ್ದೊಡವಕ್ಕುಂ ವಿನಯಮಾದೊಡಂ ಬಡವನದಂ ॥
ತುಡವೇೞ್ಕುಮೆಂದುಮಿಲ್ಲದೊ ।
ಡೆಡೆಯುಕ್ಕುಂ ಪೞಿಗಮಂತೆ ಪರಿಹಾಸಕ್ಕಂ ॥ 274 ॥

ಆವೆಡೆಯೊಳ್ ಬಿತ್ತಿದೊಡೇಂ ।
ಬೇವಿನ ಬಿತ್ತಿನೊಳೆ ಬಾೞ್ತೆ ಮೊಳೆಗುಮೆ ಮನುಜಂ ॥
ಆವೆಡೆಗೆಯ್ದಿದೊಡೇಂ ಜಡ ।
ಭಾವಮನುೞಿಯದೊಡವಂಗೆ ಸೊಗಮುದಯಿಕುಮೇ ॥ 275 ॥

ವನಧಿಯ ತಡಿಯೊಳಮೊಱೆತಪು ।
ದಿನಿನೀರೊಸರ್ದಪ್ಪುದುಪ್ಪುನೀರ್ ಬೆಟ್ಟನೊಳಂ ॥
ಜನಿಯಿಸಿದನ್ವಯಮೇವುದು ।
ಗನಹರಿವರ್ ಖಳರಿವಂದಿರೆನಿಪರ್ ಗುಣದಿಂ ॥ 276 ॥

ತನ್ನಂ ನೆಲೆಯೊಳ್ ನಿಱಿಪನು ।
ಮುನ್ನತಪದಕೇಱಿಸುವನುಮಧಮಸ್ಥಿತಿಯೊಳ್ ॥
ಕೆನ್ನಂ ಬೀೞಿಪನುಂ ನೋ ।
ೞ್ಪನ್ನಂ ತಾನಲ್ಲದಾರುಮಿಲ್ಲಿದನಾರಯ್ ॥ 277 ॥

ಬಡತನಕೆ ಬೀಡು ಬಿಜ್ಜೆಯ ।
ಕಡಲೊಳಗೀಸುವ ವಿದಗ್ಧರೇಕೆನೆಯುವರೊಳ್ ॥
ನುಡಿವೆಣ್ ನೆಲಸಿರ್ಪುದಱಿಂ ।
ಕಡಲಣುಗಿ ಕನಲ್ದು ದೂರಕೆಯ್ದುವುದುಚಿತಂ ॥ 278 ॥

ಮಿತಭಾಷಿಗಳಱಿದರಸಂ ।
ಗತಜಲ್ಪಕರಱಿದುಮಱಿಯದೆಗ್ಗರ್ ತಾಳ ॥
ಕ್ಷಿತಿರುಹದೊಳೊಣಗಿದೆಲೆಗಳ ।
ತತಿವೋಲ್ ಪಚ್ಚೆಲೆಯ ತುಱುಗಲುಲಿದಪುದೇ ಪೇೞ್ ॥ 279 ॥

ತಂದೆ ಕಿಱಿಯಂದು ಕಳೆಗ ।
ಲ್ಲಂದೊಡವಂ ನುಡಿದ ನುಡಿಗೆ ಕಿವಿಗುಡದ ಮಗಂ ॥
ಮುಂದಿಟ್ಟೋದೆನೆ ಲೇಖ್ಯಮ ।
ನೊಂದಂ ಸಭೆಯೊಳ್ ಕನಲ್ದು ಕೋಲಂ ಕೊಳ್ವಂ ॥ 280 ॥

ಕಲ್ಲದೆ ಮರಂಬೊಲಱಿವಣ ।
ಮಿಲ್ಲದೆ ಬಳೆದಿರ್ಪ ಮನುಜನಱಿದರ ಸಭೆವೊ ॥
ಕ್ಕಲ್ಲಿರೆ ನಾಯಿರ್ಪ ತೆಱಂ ।
ಸೊಲ್ಲಿಸೆ ಮೇಣ್ ನಾಯ್ ಬಗುಳ್ವ ತೆಱನಾಗದೆ ಪೇೞ್ ॥ 281 ॥

ನೆಟ್ಟನೆ ಪುಗುಗುಮೆ ಪಿರಿಯರ್ ।
ಕಟ್ಟೞ್ಕೞೆನುಸಿರ್ವ ಮಾತು ನೀಚರ ಕಿವಿಯಂ ॥
ಬೆಟ್ಟನ ಕಲ್ಲೊಳ್ ತಱೆಯಂ ।
ಬೆಟ್ಟಲೊಡಂ ಮೊನೆಗಿಡುತ್ತುಮೊಳವುಗದೆಂದುಂ ॥ 282 ॥

ಪಿರಿಯರ ಮೃದುಮಧುರಸುಖಂ ।
ಕರವಚಮೆಂತಲ್ಪರೆರ್ದೆಯನಿೞ್ಕುೞಿಗೊಳ್ಗುಂ ॥
ಅರಲಿಂದೊಸರ್ವಿನಿವಂಡೇಂ ।
ಪುರೀಷಕೆಳಸಿರ್ಪ ನೊಳಮನೆರ್ದೆಗೊಳಿಸುಗುಮೇ ॥ 283 ॥

ಕೋಲಿಂ ಬಡಿದಱೆಪಿದೊಡಂ ।
ಮೇಲೆನಿಸುವ ಜಿಜ್ಜೆ ಪುಗದು ಗಾವಿಲನೆರ್ದೆಯಂ ॥
ಪಾಲೊಳ್ ಪಲಸೂೞ್ ತೊಳೆದಿಂ ।
ಗಾಲಮನೊಣಗಿಪ್ಪೊಡೆ ಧವಳಮಾದಪ್ಪುದೆ ಪೇೞ್ ॥ 284 ॥

ಸಲ್ಲಲಿತಗುಣರಿವರ್ ಮೇಣ್।
ಕ್ಷುಲ್ಲಕರಿವರೆಂದು ತಿಳಿಯನೀವಂದು ಖಳಂ ॥
ನೆಲ್ಲೊಣಗುತಿರ್ಪಿನಂ ಕಡ ।
ಲಲ್ಲಿ ಮುಗಿಲ್ ಮೞೆಯನಿರದೆ ಕಱೆಗುಮಳುಂಬಂ ॥ 285 ॥

ಕಡವರಮೆನಿತಿರೆಯುಂ ಖಳ ।
ರೆಡೆಯೊಳ್ ಬೞಿಸಂದು ಬೇಡರವರಂ ಗುಣಿಗಳ್ ॥
ಎಡೆಬಿಡದೆ ಕಳ್ಳಿಯೊಳ್ ಮುಗು ।
ಳಿಡಿದಿರೆಯುಂ ತಿಱಿದು ಸೂಡಲಾರೆಳಸಿದಪರ್ ॥ 286 ॥

ಬಾಡಿದೊಡಂ ಬಡತನದಿಂ ।
ಬೇಡಲ್ ಬಗೆಯದ ಮನಸ್ವಿಗಳ್ ಸಿರಿವಂತರ್ ॥
ನೀಡುಂ ಸಿರಿವೆತ್ತವರುಂ ।
ಕೋಡಿನಿಸಿಲ್ಲದೊಡೆ ಬಡವರಾರಯ್ಯಲೊಡಂ ॥ 287 ॥

ಬೀಡಂ ತೊಱೆದು ಜಡರ್ ಪೆಱ ।
ನಾಡಂ ಸಾರ್ದೊರ್ಗಳ್ದು ಬೇಡಿ ಬಾಯ್ವಿಟ್ಟುಣ್ಬರ್ ॥
ಕೋಡದೆ ನಿಂದುದ್ಯಮಿಗಳ್ ।
ಮಾಡುತೆ ಮೆಯ್ ಬೆಮರೆ ಕಜ್ಜಮಂ ತಣಿಯುಣ್ಬರ್ ॥ 288 ॥

ಕಡಲ ತಡಿಯಲ್ಲಿ ನೆಲಸಿ ।
ರ್ದೊಡಮಱಿಸುಗುಮಲ್ತೆ ಬಾವಿಯುಂ ಜನಮೇನುಂ ॥
ಕುಡದನ ಪೇರ್ಸಿರಿಯಿಂ ।
ಕುಡುವನ ಬಡತನಮೆ ನೋಡೆ ಲೇಸೆನಿಸದೆ ಪೇೞ್ ॥ 289 ॥

ಎನತು ಪಣಮೆನ್ಗೆ ನೆಲಕಲ ।
ನೆನತೆಂದಪೆನಾನುಮಾ ಪಣಂ ತನತೆನೆ ತಾ ॥
ನನುಭೋಗಿಸನೆರೆವರ್ಗಿ
ಯನಾನುಮಂತದಱಿನೆನತು ಪಣಮಾಗದೆ ಪೇೞ್ ॥ 290 ॥

ಪಿರಿಯ ಸಿರಿಯೆಯ್ದುವಂದಾ ।
ದರದಿಂ ತಕ್ಕರ್ಗೆ ಕುಡುವೆವಱಿನಂ ಬಿಡದಾ ॥
ಚರಿಸುವೆವೆಂಬರ್ ಗಾಂಪರ್ ।
ವರಗುಣರೊಡರಿಸುವರಱಿನನೆಡರೊಳಮೊಲವಿಂ ॥ 291 ॥

ಕಱುವಾಗೆ ಬೇೞ್ಪವರ್ ನ ।
ಲ್ದುಱುವಂತಿರೆ ತಡೆಯದೊಲ್ದು ಕುಡುವುದು ಚಾಗಂ ॥
ಇಱಿವಂದೆ ಕಱೆಯಗುಡುವೞಿ ।
ದುಱುವ್ರೋಲ್ ತಳ್ತಿಱಿವವರ್ಗ್ಗೆ ಕುಡುಗುಂ ನೀಚಂ ॥ 292 ॥

ತನತಾಗೆ ತಾಂ ಕುಡಂ ತನ ।
ಯನುಂ ಕುಡಂ ತನ್ನದಾಗೆ ಮರಣಕೆ ಮುನ್ನಂ ॥
ಧನಮುಂ ತಾಂ ಕುಡೆ ತನಯುಂ ।
ಮುನಿಯಂ ತನಯುಂ ಬೞಿಕ್ಕೆ ಕುಡೆ ತಾಂ ಮುನಿಯುಂ ॥ 293 ॥

ಬಡತನವಮಾವರಿಸಲೊಡಂ ।
ಕಡುಗಲಿಗಳನುಱಿದೆ ಪ್ರೌಣರ್ದ ಬೆಂಗೊಳ್ವಾಪುರ್ಂ ॥
ಕಡುಗೂರಿತ್ತೆನಿಪಱಿವುಂ ।
ಕುಡುವಿಲ್ಲನ ಸೊಬಗನಿೞಿಪ ಸೊಬಗುಂ ಕಿಡುಗುಂ ॥ 294 ॥

ಪಣಮಿಲ್ಲದಂದು ಶುಭಗುಣ ।
ಗಣಮಿರೆಯುಂ ಗಣಿಸರಾರೊ ಗೞಿಯಿಸು ಪಣಮಂ ॥
ಪಣಮಿಲ್ಲದನಂ ಲೋಕಂ ।
ಪೆಣನಿಂದಂ ಹೀನನೆಂದು ನುಡಿವುದನಱಿಯಾ ॥ 295 ॥

ತಡೆಯದೆ ಬೇೞ್ಪರ್ಗ್ಗೊಲವಿಂ ।
ಕುಡುತಿರ್ದಂ ಬಡತನಕ್ಕೆ ಬೀಡಾಗಿ ನೆರಂ ॥
ಬಡೆಯಲ್ ಬಂದರ್ಗ್ಗಿಲ್ಲಂ ।
ಬೊಡೆ ಪರಣಂ ಕಂಠನಾಳಗತಮಾಗದೆ ಪೇೞ್ ॥ 296 ॥

ಪಾಡುವ ತುಂಬಿಗಳೇಂ ಮರ ।
ಗೋಡಂ ಸಾರ್ದಪ್ಪುವೆ ಪೂವನುಱಿದಂದದು ಮುಂ ॥
ಬೀಡೆನಿಸಿ ಸಿರಿಗೆ ಬಡತನ ।
ಕಾಡುಂಬೊಲನಾದರೆಡೆಗೆ ಪೋಪರೆ ನಂಟರ್ ॥ 297 ॥

ಒಡಲಿಱಿದೆಲ್ವಾದೊಡಮೇಂ ।
ಗಡ ತನ್ನೆಡರಂ ಮನಸ್ವಿ ಪೇೞ್ವನೆ ಖಳನೊಳ್ ।
ನುಡಿಯದ ಮುನ್ನಮೆ ತಾಂ ತಿಳಿ ।
ದೆಡರಂ ಪರಿಹರಿಪ ಗುಣಿಯೊಳೊರೆಯದೆ ಮಾಣಂ ॥ 298 ॥

ಪಱಿಯುಂ ಪಾಪಮುಮೊಡವ ।
ರ್ಪಱಿಗಜ್ಜಮನೆಸಗರಮುಳರಱಿವೆಯ್ದೆ ಪೊಡಂ ॥
ಅಱಿವೊಪ್ಪೋಟ್ಟನ ದುಃಖಂ ।
ಪಱಿಯುಂ ಪಾಪಮುಮಸಹ್ಯದುಃಖಮುದೆಂದುಂ ॥ 299 ॥

ಪರಮಾಪ್ತಮಿತ್ರರಲ್ಲಿಯು ।
ಮೆರೆಯದನ ಬರ್ದುಂಕೆ ಬರ್ದುಕು ಯಾಚ್ಞೆಯನೊರ್ವಂ ॥
ಸ್ಮರಿಸುವೊಡಂ ಬಗೆ ಬೆರ್ಚುವು ।
ದೆರೆವಂದಿಲ್ಲೆಂದೊಡೆಂತು ಬಗೆ ಮಱುಗುವುದೋ ॥ 300 ॥

ಕಲ್ಲದ ಮನುಜಮೃಗಂಗಳ್ ।
ಗೆಲ್ಲಂಗೊಳಲೆಳಸಿ ಮುಳಿದು ಜೊಬ್ಬಿಱಿವಾಗಳ್ ॥
ಬಲ್ಲರ್ ಸೊಲ್ಲಿಸುವೊಡೆ ಕೆ ।
ಯ್ಯಲ್ಲಿಯೆ ಕಾಣ್ಬರ್ ತಮತ್ತು ಪಲ್ಲಂ ದಿಟದಿಂ ॥ 301 ॥

ಅಱಿವರ್ಸಭೆವೊಕ್ಕೇನುಮ ।
ನಱಿಯದ ಗಾಂಪರ್ ಮನಕ್ಕೆ ಬಂದುದನೊರೆವಂ ॥
ದಱಿದರ್ ಮುಳಿಸಂ ತಡೆದೀ ।
ಯಱಿಯದರಂ ಪೆತ್ತ ತಾಯ್ಗೆ ಮಱುಕಂಗೊಳ್ವರ್ ॥ 302 ॥

ತಿಳಿಯದೆ ಪುರುಳಂ ಹೊತ್ತಗೆ ।
ಗಳನೆತ್ತಂ ತಂದು ತುಂಬಿ ಮನೆಯೋವರಿಯೊಳ್ ॥
ಫಳಮೇಂ ಕಾಪಿಡುವರುಮವ ।
ಱೊಳಿರ್ಪ ಪುರುಳಂ ವಿಚಾರಿಸುವರುಂ ಬೇಱೇ ॥ 303 ॥

ಕರುಣಾರಸಾರ್ದ್ರಹೃದಯರ ।
ಪಿರಿಯರ ಧರ್ಮೋಪದೇಶಮುಂ ಗುಣಿ ಪರಮಾ ॥
ದರದಿಂ ಕೊಳ್ವಂ ಖಳನವ ।
ಧರಿಸಂ ಪಾಯಸದ ಸವಿಯನಱಿಗುಮೆ ಚಮಸಂ ॥ 304 ॥

ಆಲಿಸದೆಂದುಂ ದುರ್ಜನ ।
ಜಾಲಂ ಸಜ್ಜನಹಿತೋಕ್ತಿಯಂ ತಿಳಿಗುಮೆ ಪೇಳ್ ॥
ಪಾಲೋಗರದಿನಿಸವಿಯಂ ।
ತೋಲಂ ಕಱ್ಚುತ್ತೆ ನಲಿವ ಪೊಲೆಯರ ಸೊಣಗಂ ॥ 305 ॥

ಎಮೆಯಿಕ್ಕುವನಿತಱೊಳ್ ಪರ ।
ಣಮಂಗಮುಂ ತೊಱೆದು ಪೋಪ ತೆಱನಱಿಯುಂ ಸಾ ॥
ಸವೆಯುಪಿತುಮಾಜನನೋದರಿಪ ।
ದವಿವೇಕಿಗಳಿಳೆಯೊಳಿರ್ದೊಡೇಂ ಪೊಂದಿದೊಡೇಂ ॥ 306 ॥

ಪರಣಕೆಣೆಯಾದರಂ ನಿ ।
ಷ್ಕರುಣದೆ ಕಣ್ಣಿದಿರೊಳಂತಕಂ ಪಿಡಿದುಯ್ಯು ॥
ತ್ತಿರೆ ಕಂಡುಮಱನನೆಸಗದೆ ।
ನರರೇತರ್ಕಕಟ ಬಱಿದೆ ದಿನಮಂ ಕಳೆವರ್ ॥ 307 ॥

ಎಡರಡಸಿದಂದು ಕೆತ್ತ ।
ಕ್ಕೆಡೆಯಾದಂದಲ್ಪಮತಿಗಳೆರ್ದೆಯಂ ಪರದೊಳ್ ॥
ಬಿಡದೆ ನಿಲಿಸುತ್ತೆ ಮಿಗೆ ಸಿರಿ ।
ವಡೆದಂದಿಹಮಲ್ಲದೆತ್ತಣದು ಪರಮೆಂಬರ್ ॥ 308 ॥

ಎಳೆಯುರೆವೆಮಗಱನೇಕೀ ।
ಗಳೆಂದು ಕಡೆಗಣಿಸಿ ಕಲ್ಲಿಗೂಬಿಂ ಪಯಣ ॥
ಕ್ಕಳವಡಿಸದರಬಿವಾಗಳ್ ।
ತಳದಿಂ ತೋಱಿಸುವ ಮಿಸುನಿ ಬೆಳವಲೆಸಿಕ್ಕುಂ ॥ 309 ॥

ನೆರೆದ ಸಭೆಗೆಯ್ದಿಯೊರ್ವನ ।
ನಿರದೊರ್ವಂ ಬಱಿಪ ಬಯ್ಕೆ ಕೇಳ್ದಾತಂ ಮೂ ॥
ಕರವೊಲುಸಿಱನಿರೆ ಬಯ್ದಂ ।
ಕೊರಗದೆ ಬಾಬ್ದ್ವರ್ಪನಾದೊಡಱ್ಜರಿಯಲ್ಕೇ ॥ 310 ॥

ಜವನುಯ್ಯಲ್ ಪಾರ್ದಿರೆ ಮಾ ।
ನವನೀ ಸಂಸಾರಜಾಲದೊಳ್ ಬೆಱೆವುದಡಲ್ ॥
ಸವಸಿಸಿ ಮಡಕೆಯೊಳೆಸ್ರೆದಂ ।
ಬುವೊಳಬಿವಂ ತಿಳಿಯ‌ದಾವೆ ನಲಿವರಿವ ತೆಱಂ ॥ 311 ॥

ವಿರಚಿಸಿ ಗೃಹಕೃತ್ಯಮನಾ ।
ದರದಿಂ ಬಟಿಕಱನನೆಸಗಿದಪೆನೆಂಬುದು ಬ ॥
ಲ್ದರೆಯುಲಿಯಡಗುವುದುಂ ಸಾ ।
ಗರದೊಳ್ ಮುೞುಗಿದಪೆನೆಂಬುದರ್ಕ್ಕೆಣೆಯಲ್ತೇ ॥ 312 ॥

ಕಲೆಗಳುಮುನ್ನತಕುಲಮುಂ ।
ಶಲಮುಂ ತಪಮುಂ ವಯಸ್ಸುಮಳವಟ್ಟಿರೆಯುಂ ॥
ಫಲಮೇಂ ಲೋಕವ್ಯವಹಾ ।
ರಲೇಶಮುಮನಱಿಯದಿರ್ದ್ದೊಡಿವು ಶೋಭಿಪುವೇ ॥ 313 ॥

ತನ್ನ ಕುಲೀನತೆಯಂ ಸಂ ।
ದುನ್ನತಿಯಂ ಬಹುಕಲಾವಿಶಾರದತೆಯನಾ ॥
ದಂ ನುತಿಸೆ ಪೆಱರ್ ತನಗದು ।
ಮನ್ನಣೆ ತಾಂ ನುತಿಸೆ ಪೈತ್ಯಮೆನ್ನದೆ ಲೋಕಂ ॥ 314 ॥

ಸಿರಿವಂತರೇನುಮಂ ಕುಡ ।
ದಿರೆಯುಂ ಬೇಸಱದೆ ಪೋಗಿ ಜನವೋಲಗಿಕುಂ ॥
ದೊರೆಕೊಳ್ಳದೊಡಂ ಮೊಗೆಯೊಳ ।
ಗಿರಿಸಿದ ಘೃತಮಿಱುಪೆ ಸುತ್ತಿ ಪರಿದಪುದಲ್ತೇ ॥ 315 ॥

ಪಡೆವುದದೊಂದಿಲ್ಲದೊಡಂ ।
ಪಡೆದಂತೀಹಿತಮನಪರಿಚಿತರೊಳಮಲ್ಪಂ ॥
ನುಡಿವಂ ಬೆಟ್ಟನೆ ನಡಿಯದೊ ।
ಡಡರುತೆ ನಾಲಗೆಯ ತುದಿಯನಬಲಿಸುಗುಂ ತೀಕ್ಷ್ಣ ॥ 316 ॥

ಪಾಟೆಯಿದೆಂದಱಿಪಿದೊಡಂ |
ಕೀೞ್ಜನಪಥಪ್ರವೃತ್ತಿಯಂ ಮಾಣ್ದಪನೇ ‖
ಕಾಟಿಂ ಬಾಯ್ಗೂಡಿದೊಡಂ |
ಕೋಟೆಯದೇಂ ಕೆದಱದಿರ್ಕುಮೇ ತಿಪ್ಪೆಗಳಂ ‖ 317 ‖

ತಿಳಿದರ ಬೞಿಸಾರ್ದವರಂ |
ತಿಳಿಯಲ್ವೇಡಿದ ವಿಶೇಷವಿಷಯಂಗಳನೀ ‖
ಗಳೆ ಬೆಸಗೊಳ್ವಂ ನಡೆಯೆಸೆ |
ಖಳನೀಗಳ್ ನಿದ್ರೆಗೆಯ್ಯಲೆಳಸುವೆನೆನ್ಗುಂ ‖ 318 ‖

ತನಗೊಡರಿಸಿದುಪಕೃತಿಯಣು |
ವನಿತಾದೊಡಮದನೆ ಗಿರಿಗೆ ತೊಣೆಯೊಂದೆಂದುಂ ‖
ನೆನೆವಂ ಸುಜನಂ ಗಿರಿಯುನಿ |
ತನೊಡರ್ಚಿದೊಡಂ ಕೃತಘ್ನನಿನಿಸುಂ ನೆನೆಯಂ ‖ 319 ‖

ಮಿಸುನಿಯ ಬಟ್ಟಲೊಳೊಸೆದೂ |
ಡಿಸಿ ನಡಪೆಯುಮೆಂಜಲೆಲೆಯನೆಮೆಯಿಕ್ಕದೆ ನಾ ‖
ಯಸವಸದಿಂ ಪಾರ್ಗುಂ ಮಾ |
ನಿಸಿದೊಡಮೇಂ ನೀಚಕೃತ್ಯಮಂ ಮಾಣ್ಗುಮೆ ಕೀೞ್ ‖320‖

ಕಡುಗಲ್ಲೆರ್ದೆಯಂ ಬೆಟ್ಟನೆ |
ನುಡಿವಂ ಪೆಱರ್ಗಡಸೆ ಸಂಕಟಂ ಮನವೊಲ್ವಂ ‖
ಕಡೆಗಣಿಪನಾರುಮಂ ಕಾ |
ಲ್ಗಡೆವಂ ಖಳನಿವನೊಳಾಂತು ಬರ್ದುಕುವುದುಂಟೇ ‖ 321 ‖

ಮುಗಿಲಂ ಮುಟ್ಟಿದೊಡೇಂ ರ ।
ತ್ನಗಣೋದ್ದೀಪಿತಮದಾದೊಡೇಂ ಮನೆಯದಱೊಳ್ ॥
ಸುಗುಣಾಲಂಕೃತೆ ಸತಿ ಬಗೆ ।
ವುಗೆ ನೆಲಸಿರದಂದು ನೋಡೆ ಕಾಡೆನಿಸದೆ ಪೇೞ್ ॥ 322 ॥

ಸೊಡಗರ್ಗುಡಿಯುಂ ಖಳರೊಲವುಂ ।
ಪಡಿಯೆಂಬರ್ ಪಿರಿಯರೆಣ್ಣೆಗುಡಿವನ್ನೆವರಂ ॥
ಸೊಡಗರ್ಗುಡಿ ತೊಳಗುಗುಮರ್ಥಂ ।
ಬಡೆವನ್ನೆವರಂ ಖಳರ್ಕ್ಕಳೊಲವಂ ತೋರ್ಪರ್ ॥ 323 ॥

ಅಮಳಗ್ರಿಂದ್ರನ ಭಾಗ್ಯಂ ।
ಸಮನಿಸೆಯುಂ ಬೀಗಿ ಜಱೆಯರಮುಮ ಖಳರ್ ವಿ ॥
ತ್ತಮನಲ್ಪಮನೊಂದಿದೊಡಂ ।
ತಮಗಂ ಧನದಂಗಮಂತರಂ ಕಿಱಿದೆಂಬರ್ ॥ 324 ॥

ಪೊಡಮಡುವರೆ ಪೇೞಿಱಿದರ್ ।
ಕಡುಸಿರಿಯಂ ಪಡೆದನೆಂದು ನೀಚಂಗಿಳೆಯೊಳ್ ॥
ಕಡವರದಿಂ ಸಮೆದೊಡಮೇಂ ।
ಮುಡಿಯೊಳ್ ತಳೆದವರೆ ಕೆರ್ಪನಡಿಯೊಳೆ ತಳೆವರ್ ॥ 325 ॥

---

ಏಗಳ್ ಗೆಯ್ಯಲ್ವೇಡಿದು ।
ವಾಗಳೆ ಕಜ್ಜಂಗಳಂ ವಿವೇಕಿಗಳೆಸಪರ್ ॥
ಆಗುಳಿಸುತೆ ತೂಂಕಡಿಸುತೆ ।
ನೀಗುವರನುಕೂಲಕಾಲಮಂ ಜಡಮತಿಗಳ್ ॥ 326 ॥

ಬಲವಂ ಮುಳಿಸಂ ಮನದಿಂ।
ತೊಲಗಿಸಿ ವಿಷಯಂಗಳಂ ವಿಚಾರಿಪನತಿದಂ ॥
ಬಲವಿಂ ಕೊಬಂತೆ ದೃಷ್ಟಿಗೆ ।
ಘೊಲನಾಗದು ಮುಳಿಸಿನಿಂದೆ ಗುಣಮೆನಿತಿರ್ದ್ದಂ ।327 ॥

ಆರೊಳಮತಿಗರ್ವದೆ ಧಿ ।
ಕ್ಕಾರಮನೆಸಗುವ ವಿವೇಕಶೂನ್ಯಂಗೆ ತಿರ ॥
ಸ್ಕಾರಂ ಸಮನಿಸದೆ ಪುರ ।
ಸ್ಕಾರಂ ದೊರೆಕೊಳ್ವುದುಂಟೆ ಧರಣೀತಲದೊಳ್ ॥ 328 ॥

ಪಿಂಗದೆ ಕಲಿಯುದಟಂ ತೋ ।
ರ್ಪ್ಪಂ ಗಡ ಖಲನೊಲ್ವನಲ್ಪಕೃತ್ಯದೆ ಮದವಾ ॥
ತಂಗದ ಬಿದುವಂ ಪೋೞ್ಗಂ ।
ಸಿಂಗಂ ಮೂಳೆಯನೆ ಕರ್ಚಿ ನಲಿಗುಂ ಸೊಣಗಂ ॥ 329 ॥

ಮಾಡುವುದು ದುರಾಚಾರಂ ।
ನೋಡಲೊಡಂ ಮನೆಯಮುಂದೆ ಬೃಂದಾವನಮೆಂ ॥
ದೇಡಿಸದಿರ್ಕುಮೆ ಲೋಕಂ ।
ನೀಡುಂ ದುರ್ವೃತ್ತನೆನಿಸಿದುಪದೇಶಕನಂ ॥330 ॥

ಆಸಕ್ತಿಯಿಂದೆ ವಿದ್ಯಾ ।
ಭ್ಯಾಸಮನಾಸತ್ತು ಗೆಯ್ದೊಡಂ ಚಿತ್ತಂ ಚಿಂ ॥
ತಾಸದನವಾಗೆ ಫಲಮೇಂ ।
ಮಾಸಿದ ವಸನಕ್ಕೆ ಬಣ್ಣಮೇಂ ಪತ್ತುಗುಮೇ ॥ 331 ॥

ಮುತ್ತಿರ್ಪರೆಲ್ಲಿಯುಂ ಖಲ ।
ರುತ್ತಮರೆಂದಾನುಮೆಲ್ಲಿಯಾನುಂ ತೋರ್ಪರ್ ॥
ಎತ್ತಂ ತೋರ್ಪುದು ಕಲ್ಗಳ ।
ಮೊತ್ತಂ ರತ್ನಂಗಳಂತು ಸುಖಲಭ್ಯಮೆ ಪೇಟ್ ॥ 332 ॥

ಗುಣಮೋ ಪೂಜಾಸ್ಥಾನಂ ।
ಗುಣಮಿಲ್ಲದೆ ಗುರುತೆ ಬಾರದುಚ್ಚಾಸನದಿಂ ॥
ಫಣಿವೈರಿಗೆ ವಾಯಸಮೋ ।
ನೆಣೆಯೆಂಬರೆ ಗೋಪುರಾಗ್ರದೊಳ್ ಕುಳ್ಳಿರೆ ಪೇಟ್ ॥ 333 ॥

ಪಂಡಿತನಂ ಜಡನೊರ್ವಂ ।
ಕಂಡೊಸೆಯದೊಡೇನೊ ಕೊಂಡುಕೊನೆಯರೆ ತಿಳಿದರ್ ॥
ಬಂಡಿಲ್ಲದೊಡೊಂದಲರೊಳ್ ।
ಬಂಡುಣಿ ಬಡವಾಗಿ ಸಾಗುಮೋ ನಂದನದೊಳ್ ॥ 334 ॥

ನೆಲಕಲನಮಿತ್ರೈಶ್ವರ್ಯಕೆ ।
ನೆಲೆಯಾದೊಡಮುಱಿಯನಕಟ ಸುಖಲೇಶಮುಮಂ ॥
ನೆಲಸಿರ್ದೊಡಮಾವಿನ ಕೆ ।
ಚ್ಚಲೊಳಾವಗಮುಣ್ಣೆ ತಿಳಿದಪುದೆ ಪಾಲ್ಸವಿಯಂ ॥ 335 ॥

ತಿಳಿದರ ಪೊರೆಯಲ್ಲಿರ್ದೊಡೆ ।
ತಿಳಿಯದರುಂ ಕಿಱಿದನಱಿವನೊಂದುವುದರಿದೇ ॥
ತಳೆಯದೆ ಪೇಟ್ ನಾರುಂ ಪೂ ।
ಗಳ ಸಂಬಂಧವೆ ಪರೀಮಳಮನಿನಿಸಾನುಂ ॥ 336 ॥

ಧನಿಕರ್ ಪಲರಿರೆಯುಂ ತನ |
ಗನುರೂಪರೊಳೆಯ್ದಿ ಮಾನಿ ನೆರಮಂ ಪಡೆವಂ ||
ಎನಿತು ಕೆಱೆತೊಱೆಗಳಿರೆಯುಂ |
ಘನದಿಂ ಬೀೞ್ವಂಬುಕಣದೆ ಚಾದಗೆ ತಣಿಗುಂ || 337 ||

ಋಣರೋಗಶತ್ರುಶೇಷಮು |
ನಣುಮಾತ್ರಮುಮುೞಿಯದಂತು ಕಳೆಯಲ್ವೇೞ್ಕುಂ ||
ಅಣುಮಾತ್ರಮನುೞಿಯಿಸೆಯುಂ |
ಗಣನಾತೀತಂ ಬೞೆಕ್ಕೆ ಸಂಕಟಜಾತಂ || 338 ||

ಕತ್ತುರಿಯುಂ ಕೆಸಱೆಂದೆಣೆ |
ಸುತ್ತೆ ಜಡಂ ಬಿಸುಡೆ ಕೊಱತೆಯೇಂ ತಿಳಿದರದಂ ||
ನೆತ್ತಿಯೊಳೆ ತಳೆಯರೇ ಪೇ |
ೞುತ್ತಮರಂ ತಿಳಿದರಾವಗಂ ಮನ್ನಿಸುವರ್ || 339 ||

ಬಲಹೀನರನಳಱಿಸುತಂ |
ಡಲೆಯಲ್ ಮುಂಬರಿವ ಪಂದೆಯೇಕೆಯೊ ನೆನೆಯಂ ||
ಬಲಶಾಲಿಗಳಿದಿರೊಳ್ ಮಾ |
ರ್ಮಲೆಯಲ್ ನಿಲ್ವಂದು ತನ್ನ ಶೋಚ್ಯಸ್ಥಿತಿಯಂ || 340 ||

ಪಿರಿಯರ ಹಿತೋಪದೇಶಂ |
ಸರಿಯೆನಿಕುಂ ತಳ್ತ ಕೆಸಱೊಳಂ ಮರ್ಬಿನೊಳಂ ||
ಭರದಿಂದಡಿಯಿಡುವಾಗಳ್ |
ಕರದೊಳ್ ಪಿಡಿದಿರ್ಪ ದಂಡಕಂ ದೀವಿಗೆಗಂ || 341 ||

ಪರ್ಯಾಲೋಚಿಸಿ ಬೞಿಕಂ ।
ಕಾರ್ಯಮನೆಸಗಲ್ಕೆ ಪೋಪುದುಚಿತಂ ಮುನ್ನಂ ॥
ಕಾರ್ಯಮನಾರಂಭಿಸಿ ಮೇಣ್ ।
ಪರ್ಯಾಲೋಚಿಸುವೆನೆಂಬುದಱಿಯಮೆಯಲ್ತೇ ॥ 342 ॥

ಪೊಱಗಣ ಕಣ್ಣಿಂ ಫಲಮೇ ।
ನಱಿವೆಂಬೊಳಗಣ್ ವಿಕಾಸಮೊಂದದೊಡಱಿಂ ॥
ಡಱಿದರೆ ಕಣ್ಣುಳ್ಳರ್ ಮೇ ।
ಣಱಿಯದರಾನನರೊಳ್ಪುರ್ವಾರಯೆ ಪುಣ್ಗಳ್ ॥ 343 ॥

ಪಣಮುಂ ಬಿಜ್ಜೆಯುಮಂ ಕಡೆ ।
ಗಣಿಪರೆ ಕಿಱಿದೆಂದು ಬುದ್ಧಿ ಶಾಲಿಗಳಿಳೆಯೊಳ್ ॥
ಕ್ಷಣಶಃ ಕಣಶಶ್ಚೈವಂ ।
ದೆಣೆಯಿಲ್ಲದ ಪಿರಿಯರೊರೆದ ವಚನಮನಾರಯ್ ॥ 344 ॥

ತಾನೇ ಬೞಲ್ದು ಗೞಿಸಿದು ।
ದಾನಂದಮನೆಂತುಟುಂಟುಮಾಳ್ಪುದು ಮನಕಂ ॥
ತೇನುಂಟುಮಾಳ್ಪುದೇ ಪೇ ।
ೞ್ತಾನಿಸೆ ಪೆಱರುಂತೆ ಪಡೆದನರ್ಘ್ಯಪದಾರ್ಥಂ ॥ 345 ॥

ಆವೆಡೆಯೊಳಿರ್ದೊಡಂ ಗುಣ ।
ಮಾವಂಗಂ ಗ್ರಾಹ್ಯಮಂತೆ ಭಕ್ತ್ಯತಿಶಯದಿಂ ॥
ಸೇವಿಪ ಗುರುವಲ್ಲಿರ್ದೊಡ ।
ಮೇವದೆ ಬಿಡತಕ್ಕುದಕ್ಕುಮೊಂದುಂ ದೋಷಂ ॥ 346 ॥

ಕೆಳೆತನಮಂ ಸಜ್ಜನರೊಳ್ ।
ಕಳೆದು ದುರಾತ್ಮರ ಸಮೂಹದೊಳ್ ಸೇರ್ವುದು ಮಂ॥
ಜುಳಶುಕಮಂ ಪಂಜರದಿಂ ।
ಕಳೆದದಱೊಳ್ ತಂದು ವಾಯಸಮನಿರಿಪ ತೆಱಂ ॥ 347 ॥

ಕಡನಂ ಕೊಳ್ವಾಗಳ್ ಪಾ ।
ಲ್ಗಡಿವಂತಿರೆ ರುಚಿರಮಾಗಿ ತೋರ್ಕುಂ ಮಗುೞ್ದಾ ॥
ಕಡನಿತ್ತಂ ಕುಡವೇೞ್ದಂ ।
ದೊಡಲೊಳ್ ತೇಳಿಱಿದ ತೆಱದಿನೆರ್ದೆ ತಲ್ಲಣಿಕುಂ ॥ 348 ॥

ಪಿರಿಯರ ಹಿತೋಕ್ತಿಗಳನನು ।
ಸರಿಸದೆ ಖಲರುಕ್ತಿಗೊಲ್ದು ಕಿವಿಗುಡುವಜ್ಞರ್ ॥
ಕರದಲ್ಲಿ ತೊಳಪ ರತ್ನಮು ।
ಕುರಮಂ ಬೀಸಾಡಿ ನೀರ ನೆೞಲಂ ನೋೞ್ಪರ್ ॥ 349 ॥

ಚಿತೆಗಂ ಚಿಂತೆಗಮಂತ ।
ರ್ಗತಬಿಂದುವೆ ಭೇದಮುಪಱೊಳಾದ್ಯಂ ದಹಿಕುಂ ॥
ಗತಜೀವಮನೊಡಲಂ ಜೀ ।
ವಿತಯುತತನುವಂ ದ್ವಿತೀಯಮೊಲ್ಲಂಗದೊಳಂ ॥ 350 ॥

ಈತಂ ಬಹಳಕಲಾನಿ ।
ಷ್ಣಾತಂ ಮೇಣ್ ಬಹುವಿನೀತನೆನೆ ಜನಜಾತಂ ॥
ಜಾತಂಗೆ ಬುದ್ಧಿವೇೞ್ದನೆ ।
ತಾತಂ ವಿಖ್ಯಾತನಪ್ಪುದೇವಿರಿದಾತಂ ॥ 351 ॥

ಬವರದೊಳಂ ವಾದದೊಳಂ ।
ವ್ಯವಹಾರದೊಳಂ ವಯಸ್ಯಮಂಡಲಿಯೊಳಮು ॥
ಭ್ಯವಹಾರದೊಳಂ ಸಂಗೀ ।
ತವಿಷಯದೊಳಮುಱಿಯೆ ಲಜ್ಜೆಯಂ ಸೊಗಮೊಗೆಗುಂ॥352॥

ಪೊಲ್ಲದಿದೊಳ್ಳಿತಿದೆಂಬಱಿ ।
ವಿಲ್ಲದ ಮೂಢಾಗ್ರಗಣ್ಯರೊಗ್ಗಿನೊಳೆಂದುಂ ॥
ಬಲ್ಲರ್ ಮೌನಮನೊಂದುವ ।
ರಲ್ಲದೆ ಸೊಲ್ಲಿಸಿ ವಿವೇಕಮಂ ಕಿಡುವರೆ ಪೇೞ್ ॥ 353 ॥

ಪ್ರಾಜ್ಞರ್ ವೇದಜ್ಞರ್ ಧ ।
ರ್ಮಜ್ಞರ್ ನೀತಿಜ್ಞರಖಿಲಶಾಸ್ತ್ರಜ್ಞರ್ ಬ್ರ॥
ಹ್ಮಜ್ಞರ್ ತಾವೆಂಬರ್ ತ ।
ಮ್ಮಜ್ಞತೆಯಂ ತಿಳಿದೊಡಿಂತುಟೇಂ ಬೀಗುವರೇ ॥ 354 ॥

ವ್ಯಯದಿಂ ಪೆರ್ಚುವ ಚೋರರ ।
ನಯನಕೆ ಪೊಲನಾಗದಿರ್ಪ ವಿದ್ಯಾಧನಕೇಂ ॥
ವ್ಯಯದಿಂ ಕುಂದುವ ತಸ್ಕರ ।
ಭಯಕೆಂದುಂ ನೆಲೆಯೆನಿಪ್ಪ ಧನಮೆಣೆಯೇ ಪೇೞ್ ॥ 355 ॥

ತನುವಲ್ಮೀಕದೊಳಿರ್ಪ ರ ।
ಸನೋರಗಂ ನಿಷ್ಠುರೋಕ್ತಿಗರಳಮನುಗುೞ್ವಂ ॥
ದನುಪಮಶಮವಿಷಭಿಷಜಂ ।
ತನತ್ತು ಕೌಶಲಮನಱಿಪಲೆಟ್ಟುಱಿವೇಟ್ಕುಂ ॥ 356 ॥

ಅನಪತ್ಯತೆ ಲೇಸೆನಿಕುಂ ।
ತನುಜಾತರ್ ಪುಟ್ಟಿ ಪುಟ್ಟಿ ಸಾವುದಱಿಂದಂ ॥
ಇನಿಸುಂ ಸುಖಮಿಲ್ಲದ ವಾ ।
ಹನದಿಂದಂ ಲೇಸು ನಡೆವುದೆನಿಸುಗುಮಿಳೆಯೊಳ್ ॥ 357 ॥

ಜನಕನ ಮಾತಂ ಕೇಳದ ।
ತನಯಂ ಸ್ವೈರಣೆಯನುಱಿದ ಕಿತ್ತಡಿಯೆಡರೊಳ್ ॥
ಮನದಟಿಲಂ ಕಳೆಯದ ಕೆಳೆ ।
ಯನುವರದೊಳ್ ಭೀತನಪ್ಪ ಭಟನಿವರಧಮರ್ ॥ 358 ॥

ಕೂರ್ಪಿಂದೆ ಮಾನಸಂ ಕ ।
ಲ್ತಿರ್ಪುದನೊರ್ಪಿಡಿಯ ಮಗ್ಗ ಪೋಲಿಸಲಕ್ಕುಂ ॥
ತೋರ್ಪೀಭುವನದ ಮಗ್ಗ ಗ ।
ಳಪ್ಪುದವಂ ಕಲ್ಲದಿರ್ಪ ವಿಷಯಮಮೋಘಂ ॥ 359 ॥

ಎಡಗರ್ಗಳ ಭಯದಿಂದಧಮರ್ ।
ತೊಡಗರ್ ಕಜ್ಜಮನೆ ಮಧ್ಯಮರ್ಕ್ಕಳ್ ಬಿಡುವರ್ ॥
ತೊಡಗಿರ್ಪ ಕಜ್ಜಮಂ ಬಿಡ ।
ರೆಡರ್ಗಳ್ ಪಲವೆಯ್ದಿದಂದುಮುತ್ತಮರಿಳೆಯೊಳ್ ॥ 360 ॥

ಚಾಗಿಗಳೆರೆವಗ್ಗೊಲ್ಗೀ ।
ವಾಗಳ್ ತಡೆಯಲ್ಕೆ ಪೋಪುದವಿವೇಕಿತೆ ಮುಂ ॥
ಭೋಗಿಶಯನಂಗೆ ಬಲಿ ಭೂ ।
ಭಾಗಮನೀವಂದು ತಡೆದು ಕವಿ ಕಣ್ಗುರುಡಂ ॥ 361 ॥

ಕೊಳಗುಳದೊಳದಟರೆರ್ದೆಗು ।
ವ್ವಳಮಂ ತಳವೆಳಗನುಂಟುಮಾಡುವ ಕಲಿಗ ॥
ಗ್ಗಳಮೆನಿಸುಗುಮೊಳಪಗೆಗಳೊ ।
ಳ್ಳವಟೆಯುಡೆ ತಗೆಳ್ದು ಪ್ರೋಣರ್ದು ಗೆಲ್ಲಂಗೊಂಡಂ ॥ 362 ॥

ಕಸಗುಡಿಸುವ ಕಸಕಿಲಪ್ರೋಲ್ ।
ಕಸವರಮಂ ಗಟಿಸಿ ಬಯ್ತು ಸಾವಂ ಕೃಪಣಂ ॥
ಕಸವರಮಂ ಕಸಮೆಂಬಿನ ।
ಮೊಸೆದೆರೆವಗ್ಗಿರ್ತು ಚಾಗಿ ಜಸದಿಂದೆಸೆವಂ ॥ 363 ॥

ಕಱೆಯೊಂದಿದೋಡವುವರೊಳ್ ।
ಮಱೆವೊಕ್ಕವರಂ ಕೃಪಾಳುಗಳ್ ತೊಱೆದಪರೇ ॥
ಕಱೆಯೊಂದಿದ ಪೆಱೆಯುಂ ಬಾಂ ।
ದೊಱೆದಲೆಯನುಮಾಂತನೊಲ್ದು ತೊಱೆಯದೆ ತಲೆಯೊಳ್॥364॥

ಒಡನಿರ್ದು ಸುಖಮನನುಭವಿ ।
ಪ್ರೊಡಭ್ಯುದಯಕಾಲದೊಳ್ ಪಲಂಬರ್ ಕೆಳೆಯರ್ ॥
ಬಡತನಮೆಂಬೊರೆಗಲ್ಲಿಂ ।
ದೊಡನಾಡಿಯ ಮೈತ್ರಿಯಂ ಪರೀಕ್ಷಿಸಲಕ್ಕುಂ ॥ 365 ॥

ಧೀರರ್ ವಿಚಾರ್ ಶಿಷ್ಟಾ ।
ಚಾರಮನೆಡರೊಳ್ ವಿಚಾರಹೀನರ ತೆಱದೊಳ್ ॥
ವಾರಿಧಿ ಪಂಕಿಲಮಕ್ಕುಮೆ ।
ಸೂರನ ಕಡುಗಾಯ್ಪಿನಿಂದೆ ಕಿಱುವೆಂಚೆಯಪ್ರೋಲ್ ॥ 366 ॥

ಸರಸರೊಡನಿರ್ದೊಡಂ ಕಾ ।
ಲುರಿಜನವಂದಿರ ಗುಣಂಗಳಂ ಗ್ರಹಿಸನಣಂ ॥
ಸರಸಿಜದೊಡನಿರ್ದುಂ ದ ।
ರ್ದುರವೇಂ ಮಕರಂದಮಾಧುರಿಯನಱಿದಪುದೇ ॥ 367 ॥

ದೂರದೊಳಿರ್ದೊಡಮಮಳರ್ ।
ಸಾರಜ್ಞರ್ ಸಾರೆ ವಂದು ಗುಣಮಂ ಗ್ರಹಿಪರ್ ॥
ದೂರದೊಳಿರ್ಪಂಬುಜಮಂ ।
ಸಾರುತೆ ಸವಿದಪ್ಪುದಲ್ತೆ ಬಂಡಂ ಭೃಂಗಂ ॥ 368 ॥

ನುಡಿ ನನ್ನಿಯನುಡಿ ಕಿನಿಸಂ ।
ಬಿಡು ದುಱುದುಂಬಿಗಳ ಕೂಟಮಂ ಪಿಡಿ ಸಯ್ಪಂ ॥
ಪೊಡಮಡು ಪಿರಿಯರ್ಗೆ ಪಡ ।
ಲ್ವಡಿಸು ಕಱುಂಬಂ ಕಡಂಗಿ ಕಡಿಯುಕ್ಕೆವಮಂ ॥ 369 ॥

ಪಿಂಗದೆ ನೀಂಚರನೊಳ್ಪಿದ ।
ರಂ ಗೆಯ್ದಪೆನೆಂಬನುಜ್ಜುಗಂ ವಿತೆಯಲ್ತೇ ॥
ಇಂಗಾಲಮನಾದರದಿಂ ।
ದಿಂಗಡಲೊಳ್ ಕರ್ಚೆ ಬೆಳ್ಪನೇನಾಂತಪುದೇ ॥ 370 ॥

ಖಳರೆಡೆಯೊಳಿರ್ದೊಡಂ ನಿ ।
ರ್ಮಳರವರ ಗುಣಂಗಳಿಂದೆ ದೂಷಿತರಾಗರ್ ॥
ಕಳಕಂಠಂ ಕೊತ್ತಟಿಯೆಡೆ ।
ಯೊಳಿರ್ದೊಡಂ ಕಾಗೆಯಂತಿರೇಂ ಕೂಗುಗುಮೇ ॥ 371 ॥

ಗುರುವಂ ರವಿಯಂ ಪೋಲಿಸಿ |
ಪರಿಕಿಸೆ ಗುರು ತರಣಿಯತ್ತ್ರಣಿಂ ನೆಱೆ ಪಿರಿಯಂ ||
ತರಣಿ ಬಹಿಸ್ತಮಮಂ ಪರಿ |
ಹರಿಪಂ ಗುರು ಹೃದಯಕೋಟರಾಂತಸ್ತಮಮಂ || 372 ||

ಸುರಸಮುಣಿಸಾದೊಡೇನಾ |
ದರಮಿನಿಸಿರದಂದು ರುಚಿಪುದೇ ಭೋಜನಕಾ ||
ದರಮೆ ಸವಿ ಭೋಜನಸ್ಯಾ |
ದರೋ ರಸೋ ಎಂದು ಪಿರಿಯರೊರೆವುದನಱಿಯಾ || 373 ||

ಈತಂ ಸತ್ಕುಲದೊಳ್ ಸಂ |
ಜಾತಂ ಮೇಣೀತನಲ್ಲನೆಂಬುದನೋರಂ ||
ತಾತಂಗಳ ಚಾರಿತ್ರಮೆ |
ಮಾತೇಂ ಪಿಸುಣಾಡಿದಪ್ಪುದೆಂಬರ್ ತಿಳಿದರ್ || 374 ||

ತನತು ಗುಣಜಾಲದಿಂ ಗುಣ |
ಮಿನಿತಿಲ್ಲದ ತಾಣದಲ್ಲಿಯುಂ ಗುಣವತ್ತಾ ||
ಜನಕಂ ಛಿದ್ರಾಚ್ಛಾದಕ |
ನೆನೆ ಸಜ್ಜನನೂರ್ಣನಾಭಿಗೆಣೆಯಾಗನೆ ಪೇಳ್ || 375 ||

ಪ್ರಥಮಭಾಗಂ ಸಂಪೂರ್ಣಂ.



ಪಲವುಂ ನೀತಿಗಳಂ ಗಾ ।
ವಿಲರುಂ ತಿಳಿವಂತುಟವ್ವೆಮೊದಲಾದರ್ ಸ ॥
ಲ್ಲಲಿತಮೃದುಮಧುರವಚನದೆ ।
ನಲವಿಂ ತಮಿಟಲ್ಲಿ ಪೇೞ್ದು ಜಸಮಂ ತಾಳ್ದರ್ ॥

ಕನ್ನಡಿಗರುಮಾ ನೀತಿಗ ।
ಳಂ ನೆಟ್ಟನೆ ತಿಳಿದು ಸಂತಸಂಬಡೆವಿನಮಾಂ ॥
ಕನ್ನಡದೊಳ್ ಕಂದಂಗಳಿ ।
ನೆನ್ನ ಜಿವನಿತೊರೆದೆನಾಲಿಸುಗೆ ಸತ್ಪುರುಷರ್ ॥

ಭಾರದ್ವಾಜಸುಗೋತ್ರಂ ।
ನಾರಾಯಣಸೂರಿಸೂನು ಯತಿರಾಜಪದಾಂ ॥
ಭೋೕರುಹಭೃಂಗಂ ನರಹರಿ ।
ಯೋರಂತೀ ನೀತಿಮಂಜರಿಯನೊಲ್ದೊರೆದಂ ॥



# ಟಿಪ್ಪಣಿ.

---*---

## ಮಂಗಳ ಶ್ಲೋಕಗಳು.

---

ಇಂಗಡಲ್=ಇನಿದು+ಕಡಲ್=ಕ್ಷೀರಸಮುದ್ರ. ಕುವರಿ= ಕುಮಾರಿ. ಇಂಗಡಲಕುವರಿ=ಲಕ್ಷ್ಮಿ. ಬೀಱೆ=ಪಸರಿಸಲು. ಚೆಲ್ವಂಗು=ಸೌಂದರ್ಯವನ್ನು. ನಗುವ=ಹಾಸ್ಯಮಾಡುವ, ಅಣಕಿಸುವ ಒಳ್ಪಂ=ಸುಖವನ್ನು. ಈಗೆ=ಕೊಡಲಿ. ತಟಿತ್=ಮಿಂಚು.

ಸುರನಿಕರ......ಸರಸಿರುಹಂ=ದೇವತೆಗಳ ಸಮೂಹದ ಕಿರೀಟಗಳೆಡೆಯುಲ್ಲಿ ಪ್ರಕಾಶಿಸುವ ದೊಡ್ಡರತ್ನಗಳ ಸಮೂಹದ ಮನೋಹರವಾದ ಪ್ರಸರಿಸುವ ಕಿರಣಗಳ ಗುಂಪಿನಿಂದ ದೀಪಿತವಾದ ಪಾದಕಮಲಗಳುಳ್ಳ, ಎಂದರೆ ದೇವತೆಗಳಿಂದ ನಮಸ್ಕೃತನಾದ. ಸಿರಿಯರಸಂ=ಲಕ್ಷ್ಮೀಪತಿ, ವಿಷ್ಣು. ಆವಗಂ=ಯಾವಾಗಲೂ. ಪೊರೆಗೆ=ರಕ್ಷಿಸಲಿ.

---

1. ಒಮ್ಮೆ=ಬಂದಾವೃತ್ತಿ. ಸಂದು=ಹೋಗಿ. ಬೇಡ್ಪ =ಬೇಡುವ. ಪುರುಳಂ=ವಸ್ತುವನ್ನು, ದ್ರವ್ಯವನ್ನು. ಪೊಗೞ್ದಪುದು=ಹೊಗಳುತ್ತದೆ. ಈಗುಮೆ=ಕೊಡುವುದೇ? ಒಱಲ್ದು= ಪ್ರೀತಿಸಿ. ಒಱಲ್—ಅರ್ಥಾಂತರ, ಕೂಗಿಕೊಳ್. ಒರಲ್= ಉಲೂಖಲ. ಇನ್ನುಣಿಸಂ=ರುಚಿಯಾದ ಆಹಾರವನ್ನು—ಇನಿದು+ ಉಣಿಸು.

2. ಕಱೆ=ಕಳಂಕ. ಕರೆ=ತೀರ. ಕಱೆ (ಕ್ರಿ)=ದೋಹನೇ. ಕರೆ (ಕ್ರಿ)=ಆಹ್ವಾನೇ. ಬಿಱುನುಡಿ=ನಿಷ್ಠುರವಾದ ಮಾತು

—ಬೆಟ್ಟಿತು + ನುಡಿ. ಇನಿದಕ್ಕುಂ = ಹಿತವಾಗುವುದು. ಇನಿವಾತು—ಇನಿದು + ಮಾತು. ಭಕ್ತ = ಶಿವನಮೇಲೆ ಕಲ್ಲನ್ನು ಬೀರಿದ ಶಾಕ್ಯಯನಾಯನಾರೆಂಬ ಶಿವಭಕ್ತ. ಕಱೆಗೊರಲಂಗೆ = ನೀಲಕಂಠನಿಗೆ, ಶಿವನಿಗೆ. ಅರಲಸರಲೊ = ಪುಷ್ಪಬಾಣವೋ.

3. ಪಡೆವೊಡೆ = ಪಡೆಯಬೇಕಾದರೆ. ಪಡೆವುದು = ಪಡೆಯಬೇಕು. ಅವಂದಿರ = ಅವರ. ದಿರ್ ಪ್ರತ್ಯಯ. ಪಯದಿಂ = ಹಸುವಿನಿಂದ. ಪಯಮುಂ = ಹಾಲನ್ನು. ತಡೆಯದೆ = ಸಾವಕಾಶವಾದಡೆ. ಕೆಳೆಗೊಳ್ವರ್ = ಸ್ನೇಹಿಸುವರು.

4. ಕುಡದರ = ಕೊಡದವರ. ಎರೆವರ್ಗ್ಗೆ = ಬೇಡುವವರಿಗೆ. ಅರ್ಥಮೆ ಅಕ್ಕುಂ—ಅವಧಾರಣೆಗೆ ಸ್ವರಂ ಪರವಾಗೆ ಸಂಧಿಯಿಲ್ಲ. ಎಱೆದಪುದು = ಸುರಿಯುತ್ತದೆ.

5. ಕೆಳೆ = ಸ್ನೇಹ. ಬಳೆದಪುದೇ = ವೃದ್ಧಿಯಾಗುತ್ತದೆಯೇ ? ಸಸ್ಯಾದಿಗಳ ವೃದ್ಧಿಯನ್ನು ಹೇಳುವಾಗ ಬೆಳೆ. ಮತ್ತಂ = ತಿರುಗಿ. ಕೆಳೆಯರ್ = ಸ್ನೇಹಿತರು. ಮಗುೞ್ದು = ಪುನಃ. ಒಸೆಯಲೊಡಂ = ಪ್ರಸನ್ನರಾಗಲು. ಕಳವುದಕಣದಿಂ = ಒತ್ತದಕಾಳಿನಿಂದ. ತುಷಮಂ = ಹೊಟ್ಟನ್ನು. ಇದರ ತದ್ಭವವಾದ ತುಸ ಸ್ವಲ್ಪಾರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. ಸಯ್ತಕ್ಕುಮೆ = ಸೆಟ್ಟಗಾಗುವುದೇ ?

6. ಇನಿಯಳುಂ = ಹೆಂಡತಿಯೂ. ಇನನುಂ = ಗಂಡನೂ. ಇನಿಸುಂ = ಸ್ವಲ್ಪವೂ. ಮಾರ್ಕೊಳ್ಳದೆ = ಪ್ರತಿಭಟಿಸದೆ. ಎಸವುದು = ಎಸಗುವುದು = ಮಾಡಬೇಕು. ಒಳ್ಗಜ್ಜಗಳಂ = ಒಳ್ಳೆಯ ಕೆಲಸಗಳನ್ನು—ಒಳ್ಳಿತು + ಕಜ್ಜ. ನೋೞ್ಪವರ್ತ್ತ = ನೋಡುವುವಲ್ಲವೇ ?

7. ಎನಿತೊಳವು = ಎಷ್ಟಿರುವುವು. ಅನಿತುಂ = ಅಷ್ಟೂ. ಬೀಗುತ್ತೆ = ಉಬ್ಬುತ್ತ. ತೊನೆಯದಿರ್ = ಆನಂದದಿಂದ ತೂಗಾಡಬೇಡ. ಕಿತ್ತಡಿ = ಮುನಿ, ಅಗಸ್ತ್ಯ—ಕಿರಿದು + ಅಡಿ.

8. ಕಿಡಿಯಿಡುತಡರ್ವ್ದ = ರೌದ್ರಾಕಾರವಾಗಿ ಏಳುವ. ಎಡೆಗುಡದೆ = ಅವಕಾಶಕೊಡದೆ. ಉಡುಗಿಪುದಿದಲ್ತೆ = ಅಡಗಿಸುವುದಲ್ಲವೇ. ಗುಡುಗುಡಿಸಿ = ಶಬ್ದಮಾಡಿಕೊಂಡು. ಪೊನಲಂ = ಪ್ರವಾಹವನ್ನು. ಅಱಿದು = ನಾಶವಮಾಡಿ. ಪರಿಯಿಪುದು = ಹರಿಯಿಸುವುದು.

9. ಉಗ್ರಾರಾತಿಯುಮಂ = ಭಯಂಕರನಾದ ಶತ್ರುವನ್ನೂ ಕೂಡ. ಉಗ್ರ+ಅರಾತಿ. ಸ. ದೀ. ಸಂ. ಪೊಡರ್ಪುಗುಂದದೆ = ಕಾಂತಿಗೆಡದೆ, ಕಳೆಗುಂದದೆ. ಮಾರಾರಾತಿಯ = ಮನ್ಮಥಶತ್ರುವಿನ, ಶಿವನ. ರಾರಾಜಿಪ = ತೊಳಗುವ. ಲಕ್ಕಿಪುದೆ = ಲಕ್ಷ್ಯವಮಾಡುವುದೇ ?

10. ಅಡಸಿದ = ಒದಗಿದ, ಸಂಭವಿಸಿದ. ಎಡರಂ = ಕಷ್ಟವನ್ನು, ಸಂಕಟವನ್ನು. ಹಿಮರುಚಿ = ಶೀತಕಿರಣ, ಚಂದ್ರ ಮಬ್ಬಂ = ಕಳಂಕವನ್ನು, ಕತ್ತಲೆಯನ್ನು. ತೆಮರದೆ = ಕೆಡಿಸದೆ. ತಿರೆಯೊಳ್ = ಭೂಮಿಯಲ್ಲಿ. ಸ್ಥಿರಾ (ಸ್ತ್ರೀ). ತಗುಳ್ದ = ವ್ಯಾಪಿಸಿದ. ತಪಿಪಂ = ಕೆಡಿಸುವನು.

11. ಉಮ್ಮಳಿಸುತ್ತೆ = ತಪಿಸುತ್ತೆ. ಊರ್ಧ್ವರ್ಕ (ಸ್ತ್ರೀ). ಎಪೆಗಿಡರ್ = ಅಧ್ಯರ್ಯಪಡರು. ಅಱುಲ್ದು = ತಪಿಸಿ. ಸಿಡಿಮಿಡಿಗೊಳ್ವರ್ = ತಲ್ಲಣಿಸುವರು, ವ್ಯಾಕುಲಿಸುವರು. ಸುಟ್ಟುರ = ಸುಂಟುರಗಾಳಿ. ಒಡರಿಕುಮೆ = ಉಂಟುಮಾಡುವುದೇ ?

12. ಎಡೆಯಾದ = ಆಶ್ರಯವಾದ. ಭುವನಂ = ನೀರು. ಜಿನುಂಗುವುದೊ = ಸ್ರವಿಸುವುದೋ. ಬಿಸವಂದಂ = ಆಶ್ಚರ್ಯ, ಕೌತುಕ.

13. ಕುಡುವಂ ಗಡ = ಕೊಡುವನಲ್ಲವೇ. ಚಾಗಿ = ದಾನಿ. ತ್ಯಾಗಿ (ಸ್ತ್ರೀ). ಬೇಡಲೊಡಂ = ಬೇಡಲು. ಕಡಲಣುಗಂ = ಕಡಲ+ ಅಣುಗಂ = ಸಮುದ್ರಪುತ್ರ, ಚಂದ್ರ.

14. ಬೆಱೆಯಲ್ಬೇಡಂ = ಅಹಂಕಾರಪಡಬೇಡ. ಬೆಱೆ (ಕ್ರಿ) = ಸೇರು. ಸೊನ್ನೆಯ = ಬಂಗಾರದ. ಸ್ವರ್ಣ (ಸ್ಕೃ). ಸೊನ್ನೆಯ ಬೆಟ್ಟಂ = ಸ್ವರ್ಣಪರ್ವತವೂ, ಮೇರುವೂ. ಸೊನ್ನೆ = ೦. ಶೂನ್ಯ (ಸ್ಕೃ). ಮುನ್ನಂ = ತ್ರಿಪುರಸಂಹಾರಕಾಲದಲ್ಲಿ.

15. ಏವುದು = ಏಗೆಯ್ವುದು, ಏನುಕೆಲಸಕ್ಕೆ ಬಂದೀತು ? ಏಡಂಗೆ = ಕಿವುಡನಿಗೆ.

16. ಪೆರ್ಮೆಯಂ = ಗೌರವವನ್ನು. ಪಿರಿದು + ಮೆ. ಕೀೞೆಡೆಗಂ = ನೀಚರಬಳಿಗೂ. ಕೀೞ್ — ಅರ್ಥಾಂತರ, ಬಂಗಾರ, ಕಡಿವಾಳ. ಕೀೞ್ (ಕ್ರಿ) = ಉತ್ಪಾಟನೆ. ಪೆಂಪು = ಆಧಿಕ್ಯ, ಮಹಿಮೆ. ಪಿರಿದು + ಪು. ಕಾಲ್ಗಳೊಳಂ = ಕಾಲುವೆಗಳಲ್ಲಿಯೂ. ಮುನ್ನೀರ್ = ಸಮುದ್ರ. ನದಿಯನೀರು, ವರ್ಷದ ನೀರು, ಒರತೆಯ ನೀರು, ಈ ಮೂರುವಿಧವಾದ ನೀರುಳ್ಳುದು.

17. ಉೞಿವನೆ = ಬಿಟ್ಟುಬಿಡುವನೇ ? ದೀನಂ = ಬಡವನು. ಇನಿವಣ್ಗಳಂ = ಮಧುರಫಲಗಳನ್ನು. ಇನಿದು + ಪಣ್. ಬಾೞೆ = ಕದಳಿ. ಬಾಳೆ = ಒಂದು ವಿಧವಾದ ಮೀನು. ಕಂದು — ಅರ್ಥಾಂತರ, ಕಳಂಕ.

18. ಎನಸುಂ = ಹೆಚ್ಚಾಗಿ. ಬಿಱುವಾತು = ಬೆಟ್ಟಿತು + ಮಾತು = ಕಠಿನವಾದ ಮಾತು. ದಿನಪನ = ಸೂರ್ಯನ. ಬಿಸುಗದಿರೋ = ಉಷ್ಣ ಕಿರಣಗಳೋ. ಬೆಚ್ಚನೆ + ಕದಿರ್. ತಣ್ಗದಿರ್. ತಣ್ಣಿತು + ಕದಿರ್. ಪೆರ್ಚಂ = ವೃದ್ಧಿಯನ್ನು.

19. ಪೊಂಪುೞಿವೋಕುಂ = ಹರ್ಷವನ್ನು ಪಡೆವುದು. ತೆಂಬೆಲರ = ಮಲಯಾನಿಲದ. ತೆಂಕ + ಎಲರ್. ಶೀಟದಿಂ = ಬೀಸುವಿಕೆಯಿಂದ. ಸಹಕಾರಂ = ಮಾವು.

20. ಅೞಲಂ = ದುಃಖವನ್ನು. ರುಜೆಯುಂ = ನೋವನ್ನು, ರೋಗವನ್ನು.

21. ಬೆಳ್ಳಕ್ಕರಿಗರ = ಅಜ್ಞಾರ, ಮೂಢರ. ಕಲ್ಪಿ = ವಿದ್ಯೆ. ಕಲ್ + ಪಿ. ತೋರ್ಕೆವಡೆಯದು = ಶೋಭಿಸದು. ಪೊರೆಯೊಳ್ = ಪಾರ್ಶ್ವದಲ್ಲಿ, ಸಮೀಪದಲ್ಲಿ. ಪೊಱೆ = ಭಾರ. ಬೆಳ್ಳಂಗೆಡೆದು = ಪ್ರವಾಹರೂಪವಾಗಿ ಹರಡಿಕೊಂಡು. ಇನನ = ಸೂರ್ಯನ. ದಳ್ಳಿಸ = ಜ್ವಲಿಸಲು, ತಪಿಸಲು. ಮಿಾಂಬುೞುವಿನ = ಮಿಂಚುಹುಳುವಿನ. ಎಸಕಂ = ಪ್ರಕಾಶ.

22. ಒಗೆದುದು = ಹುಟ್ಟಿತು. ಸೇವಿಸುವರ್ = ಕುಡಿವವರು. ಹಾಲಾಹಲಮಂ = ವಿಷವನ್ನು.

23. ಪೞಿವೊರ್ದದರುಂ = ಅಪವಾದಕ್ಕೆ ಒಳಗಾಗದವರೂ. ಪೞಿ —ಅರ್ಥಾಂತರ, ವಸ್ತ್ರ, ಲೋಹಪಗಟ್ಟಿ, ನಾಯನ್ನು ಹೊಡೆವುದು. ಪಾೞಿಯಂ = ಕ್ರಮವನ್ನು. ಪಾಳಿ = ಸಮೂಹ. ಕುೞಿಯಾಂಪುದಲ್ತ = ಹಳ್ಳವಾಗುವುದಲ್ಲವೇ? ಆಗಳುಂ = ಯಾವಾಗಲೂ. ಇಱುಂಪೆಗಳ್ = ಇರುವೆಗಳು.

24. ಒರೆದು = ಹೇಳಿ. ಒಱೆ (ಕ್ರಿ) = ಸ್ರವಿಸು. ಎಳಸದೆ = ಅಪೇಕ್ಷಿಸದೆ. ತಣಿಗುಂ = ತೃಪ್ತಿಯನ್ನು ಪಡೆವುದು. ಆರವೆ = ತೋಟ. ಆರಾಮ (ಸ್ಕ್ಷ).

25. ಸಂತರ್ = ಸತ್ಪುರುಷರು. ಎಂತುಂ = ಹೇಗೂ. ನೀಗಿದಪರ್ = ಕಳೆದುಕೊಳ್ಳುತ್ತಾರೆ. ಮುಂತೆ = ಮುಂದೆ. ಬಿಣ್ಪಿತಾದೊಡಂ = ಭಾರವಾದುದಾದರೂ. ಪೇೞ. ವಿಧಿರೂಪದ ಮಧ್ಯಮಪುರುಷೈಕವಚನದಲ್ಲಿ ಅ ಪ್ರತ್ಯಯವು ಬಂದಿದೆ. ಪುರುಳ್ = ವಸ್ತು.

26. ತನು = ಮೈ. ತಿರೆಬಾನ್ಗಳೆಲ್ಲಮಂ = ಭೂವ್ಯಾಕಾಶಗಳೆಲ್ಲವನ್ನೂ.

27. ಪಾರದೆ = ನಿರೀಕ್ಷಿಸದೆ. ಪಾಱು (ಕ್ರಿ) = ಹಾರು. ಮುಯ್ಯಂ = ಪ್ರತ್ಯುಪಕಾರವನ್ನು. ಆಸತ್ತುಂ = ಶ್ರಮಪಟ್ಟೂ.

ಧಾ. ಆಸೆಯು. ಅಗಿ-ಅರ್ಥಾಂತರ, ಭಯಪಡು, ಸಂತೋಷಪಡು. ರಸನೆಗೆ = ನಾಲಗೆಗೆ. ಪನೆಗಳ್ = ಹಲ್ಲುಗಳು. ಪನೆ-ಅರ್ಥಾಂತರ, ಒಂದು ಮರ.

28. ಅಳವಱಿದ = ಮಿತಿಯಿಲ್ಲದ. ಎಳಗಾಯುಂ. ಎಳದು + ಕಾಯ್. ಅಳವಡುಗುಂ = ಅನುಕೂಲಿಸುವುದು. ಪಣ್ತೊಡಂ = ಹಣ್ಣುಬಿಟ್ಟರೂ. ಏನೋ = ಏನುಪ್ರಯೋಜನವೋ.

29. ಬೊಮ್ಮದೊಳ್ = ಪರಬ್ರಹ್ಮದಲ್ಲಿ. ಬ್ರಹ್ಮ (ಸ್ಕೃ). ಎರ್ದೆಯುಂ = ಮನಸ್ಸನ್ನು. ಹೊ. ಗ. ಎದೆ. ದಿಮ್ಮಿದರ್ = ಮಹಾತ್ಮರು. ನೆಮ್ಮಿದ = ಆಶ್ರಯಿಸಿದ.

30. ಮಿೞ್ತು = ಮೃತ್ಯು. ಅಸುಂಗೊಳಲ್ = ಪ್ರಾಣವನ್ನ ಪಹರಿಸಲು. ಉಕಾರಾಂತವಾದ ಅಸುಶಬ್ದಕ್ಕೆ ವಿಕಲ್ಪವಾದ ಬಿಂದು ಬಂದಿದೆ ಪೊೞ್ತಿನೊಳ್. ಹೊ. ಗ. ಹೊತ್ತಿನೊಳು. ಏಗೆಯ್ವ = ಏನುಮಾಡುವೆ ? ಅಱನಂ = ಧರ್ಮವನ್ನು. ಎೞ್ತರೆ = ಬರಲು. ಪೂರಂ = ಪ್ರವಾಹವು. ಅೞ್ತಿಯಿಂ = ಆಸಕ್ತಿಯಿಂದ. ಅಱಿಯುಮೆ = ಅಜ್ಞಾನ. ಅಱಿ + ಅ + ಮೆ. ಅ ಎಂಬುದು ಪ್ರತಿಷೇಧವನ್ನು ತೋರಿಸುವ ಪ್ರತ್ಯಯ. ಇತರೋದಾಹರಣಗಳು-ಇಲ್ಲಮೆ, ತೀರಮೆ. ತಮಿೞಿನಲ್ಲಿ ಈ ಪ್ರತ್ಯಯವು ದೀರ್ಘವಾಗಿರುವುದು. ಉ. ಅಱಿಯಾಮೈ, ಇಲ್ಲಾಮೈ, ತೀರಾಮೈ.

31. ಪಱಿಯಿಸುವರ್ = ಕಳೆವರು, ಹೋಗಾಡಿಸುವರು. ಪರಿ (ಕ್ರಿ) = ಚಲಿಸು. ಪೆಱವಪ್ಪೊಳ್ = ಇತರವಾದ. ನಪುಂಸಕಲಿಂಗ ಬಹುವಚನ. ಏಱು = ಗಾಯ. ಏಱು (ಕ್ರಿ) = ಆರೋಹಣೇ. ಇಱಿವಂದು = ಹೊಡೆವಾಗ. ಇೞಿಯುದವ್ಪೊಲ್ = ಬೀಳದಹಾಗೆ. ಆಂತು = ಆತುಕೊಂಡು. ಏರ್ಪಱುಗುಂ = ಗಾಯವನ್ನು ಪಡೆವುದು. ಏಱು + ಪೆಱು. ಇಱಿವಂದು ಪೆಱವಪ್ಪೊಳ್ ಅಂಗಂಗಳೊಳ್ ಏಱು ಇೞಿಯುದವ್ಪೊಲ್ ಕೆಯ್ ಆಂತು ಏರ್ಪಱುಗುಂ—ಎಂದನ್ವಯವು.

32. ಉಜ್ಜುಗಿಸಿ=ಪ್ರಯತ್ನಿಸಿ. ಉದ್ಯೋಗ (ಸ್ಕ್ರ). ಒಡರ್ಚುವ = ಮಾಡುವ. ಅಕ್ಕೆ=ಆಗಲಿ. ಬಜ್ಜರದೆ = ವಜ್ರದಿಂದ. ಸವೆದ=ಮಾಡಿದ. ಪಜಳಿಪೊಡಂ=ಪ್ರಜ್ವಲಿಸಿದರೂ. ಅಗುೞಿ- ಹೊ. ಗ. ಅಗಣಿ. ಅರ್ಗಳ (ಸ್ಕ್ರ).

33. ನಿಱಿಸಲ್=ನಿಲ್ಲಿಸಲು. ತುತಿ=ಸ್ತುತಿ. ಕಿಱುವೆಂಚೆಗೆ=ಸಣ್ಣಕೊಳಕ್ಕೆ. ಕಿಱಿದು+ಬೆಂಚೆ.

34. ತುಱುಗಿದ = ದಟ್ಟವಾಗಿ ವ್ಯಾಪಿಸಿದ. ಪೆಱಸಾರ್ವುದು = ಹಿಂಜರಿವುದು. ಕುರುಡೋ = ಕುರುಡುಗಣ್ಣೋ.

35. ತವಕಿಸುವಂತಿರೆ=ಆಶೆಪಡುವಹಾಗೆ. ತವರಾಜಕ್ಕೆ =ಸಕ್ಕರೆಗೆ. ತಕ್ರಂ=ಮಜ್ಜಿಗೆ. ನೋೞ್ಪೊಡೆ = ಆಲೋಚಿಸಿ ನೋಡಿದರೆ.

36. ತಕ್ಕರ್ಗೆ=ಯೋಗ್ಯರಿಗೆ. ಅಕ್ಕಱಿಂ=ಪ್ರೀತಿಯಿಂದ. ಹೊ. ಗ. ಅಕ್ಕರೆ. ತೆಕ್ಕನೆ=ಒತ್ತಾಗಿ ತೀವಿರ್ದ= ತುಂಬಿದ್ದ. ಪೊನ್ನಂ=ಗೊಬ್ಬರವನ್ನು. ಕೆಯ್ಯೊಳ್ = ಗದ್ದೆಯಲ್ಲಿ.

37. ಪೊರೆಯೊಳ್ = ಸಮೀಪದಲ್ಲಿ. ಪೊರೆ (ಕ್ರಿ) = ರಕ್ಷಿಸು. ಪೊರೆಯೇಱೆ = ಆನಂದದಿಂದ ಉಬ್ಬಿ. ಗಾಂಪಂ = ಮೂಢನು. ಗಱವುತೆ = ತಲೆಯೆಲ್ಲಾ ಹರಟುತ್ತ. ಅಱಿಯ = ಅರಿಯೆಯಾ ?

38. ಎತ್ತಂ = ಎಲ್ಲಿಯೂ. ಮುತ್ತೊಡೆ = ಬಲಿತರೆ. ಧಾ. ಮುದು. ಮಿಡಿ = ಎಳೆಯಕಾಯಿ, ಕಲಾಟು. ಮುತ್ತಿನ = ಉಳಿದ.

39. ಬಿಜ್ಜೆಯಂ = ವಿದ್ಯೆಯನ್ನು. ಉಜ್ಜಳಿಪ = ಉಜ್ವಲಿಪ. ಸುಜ್ಜುಕಂ = ಮೊಗ್ಗು. ಗೊಜ್ಜಗೆ = ಸೇವಂತಿಗೆ. ಬೀಱುಗುಮೆ = ಹರಡುವುದೇ ? ಕಂಪಂ = ವಾಸನೆಯನ್ನು.

40. ಅಶೇಷ......ಣರಪ್ಪ = ಸಮಸ್ತವಾದ ವಿದ್ಯೆಗಳೇ ಒಡವೆಗಳಾಗಿ ಉಳ್ಳ. ಶೇಷಾವಯವಂಗಳ್ = ಉಳಿದ ಅವಯವಗಳು.

---

41. ವೇಳೆಯೊಳ್ = ಸಮಯದಲ್ಲಿ. ಮುದಂದಾಳುತ್ತೆ = ಸಂತೋಷದೊಡನೆ. ಅದು = ಉಪಕೃತಿ. ತಾಳ್ = ಬುಡ.

42. ಕುಲಜಂಗೆ = ಸತ್ಕುಲದಲ್ಲಿ ಹುಟ್ಟಿದವನಿಗೆ. ಕಂಡರಿಸಿದ = ಕೆತ್ತಿದ. ಲಯಿಪುದು = ಕೆಡುವುದು.

43. ಅಕಳಂಕರ್ = ಶುದ್ಧಾತ್ಮರು. ನಿಜ......ಮಂ = ತಮ್ಮ ಒಳ್ಳೆಯ ಗುಣಗಳಲ್ಲಿ ಸ್ವಲ್ಪವನ್ನೂ ಕೂಡ. ಸಂಕಂ = ಶಂಖವು. ಕೀರಂ = ಕ್ಷೀರ, ಹಾಲು. ತನತ್ತು = ತನ್ನ. ಇನಿಸು = ಸ್ವಲ್ಪವಾದರೂ. ಸುಡೆ ಸಂಕಂ ತನತ್ತು ಬೆಳ್ಪಂ ಕಾಸೆ ಕೀರಂ ತನತ್ತು ಸವಿಯುಂ ಇನಿಸು ಉಳಿದಪುದೇ—ಎಂದನ್ವಯವು.

44. ಅಳವಂ = ಶಕ್ತಿಯನ್ನು. ಬಳಲ್ದೇಂ = ಕಷ್ಟಪಟ್ಟು ಪ್ರಯೋಜನವೇನು ? ನಳನಳಿಸಿ = ಹೊರವಾಗಿ, ಕೊಬ್ಬಿ.

45. ಮಣಿವರೆ = ಬಗ್ಗುವರೇ ? ಪರಣಂ = ಪ್ರಾಣವು. ಧೀರರ್ ಮಣಿವರ—ಎಂದನ್ವಯವು. ಇರ್ಕಡಿ = ಎರಡುತುಂಡು. ಕಲ್ಲಕಂಭಂ ಮಣಿಗುಮೆ ಇರ್ಕ್ಕಡಿಯಕ್ಕುಂ—ಎಂದನ್ವಯವು.

46. ಓದಿಂಗೆ = ವಿದ್ಯಾಭ್ಯಾಸಕ್ಕೆ. ಬೋಧಂ = ಜ್ಞಾನವು. ಅನ್ವಯಕ್ಕೆ = ಮನೆತನಕ್ಕೆ. ವಾದಕಕೌಶಲಕೆ = ಬಾಜಿಸುವವನ ಚಾತುರ್ಯಕ್ಕೆ.

47. ಒಳ್ಳಿತು = ಒಳ್ಳೆಯದು. ಒಳ್ಳಿತ್ತು ಎಂದೂ ಉಂಟು.

48. ಪೊಲ್ಲದು = ಕೆಟ್ಟದು. ಕೂಟಂ = ಸಹವಾಸವು, ಸ್ನೇಹವು. ಆರ್ಗಂ. ಹೊ. ಗ. ಯಾರಿಗೂ.

49. ಸಲ್ಗುಂ = ಉಂಟಾಗುವುದು. ನಲ್ಗಜ್ಜಮಂ = ಒಳ್ಳೆಯ ಕೆಲಸವನ್ನು. ಜನರದೂಸಱೆಂ = ಜನರ ನಿಮಿತ್ತವಾಗಿ. ಎಱೆದ = ಹಾಯಿಸಿದ. ಪರಿಕಾಲ್ಗಳೊಳ್ = ಕಾಲುವೆಗಳಲ್ಲಿ.

50. ಸಾರುತೆ = ಸೇರುತ್ತ. ಧಾ. ಸಾರ್. ಸಾಱು (ಕ್ರಿ) = ಘೋಷಣೇ. ಎರೆಗುಂ = ಯಾಚಿಸುವುದು. ಈಂಟದ = ಕುಡಿಯದೆ. ಬಗರಗೆಯುಂ = ಚಿಲುಮೆಯನ್ನು. ನೀರಧಿ = ಸಮುದ್ರ. ತೃಷಿತರ್ = ನೀರಡಿಕೆಯಾದವರು.

51. ಕಡೆಗಣಿಸದಿರ್ = ಅಸಡ್ಡೆಮಾಡಬೇಡ. ಆರುಮಂ. ಹೊ. ಗ. ಯಾರನ್ನೂ. ವರಾಕರ್ = ಅಲ್ಪರು, ತುಚ್ಛರು. ಕಿತ್ತುೞಿ = ಸಣ್ಣ ಉೞಿ. ಕಿಱಿದು + ಉೞಿ. ಕೆನ್ನಂ = ವಿಶೇಷವಾಗಿ. ಕಡಂಗಿ = ಉತ್ಸುಕನಾಗಿ. ಕಿತ್ತಡಿ = ಋಷಿ. 7 ನೆಯ ಪದ್ಯದ ಟಿಪ್ಪಣವನ್ನು ನೋಡಿ.

52. ಕವಲ್ತು = ಕವಲಾಗಿ. ಆಡುಂಬೊಲಂ = ವಿಹಾರಸ್ಥಾನವು. ಕರ್ಮಧಾರಯದೊಳ್ ಪೂರ್ವಪದಂ ಕೃತ್ತಾಗಿ ಗದಬಜಕಾರಂಗಳ್ ಪರದೊಳಿರ ಬಿಂದುವಕ್ಕುಂ. ಪಲರ್ಮೆ = ಹಲವು ಸಾರಿ. ಹೊತ್ತಗೆ = ಪುಸ್ತಕ (ಸ್ಕೃ).

53. ಅಮರ್ದಂ = ಅಮೃತವನ್ನು. ಎಱಂಕೆಯುಂ = ರೆಕ್ಕೆಯನ್ನು.

54. ಉಪಕರಿಪುದು = ಉಪಕಾರಮಾಡುವುದು. ತೆಗೆಯಲೊಡಂ = ತೆಗೆಯಲು. ಇಱಿಯದ = ಕುಟುಕುವುದಿಲ್ಲವೇ ?

55. ಎಂಬಿನಂ = ಎಂಬಂತೆ. ಉಸಿಕನೆ = ಮೌನವಾಗಿ. ಬಕೋಟಂ = ಕೊಕ್ಕರೆ.

56. ಅವಲುಂ = ಕೆಂಪುನೆಯ್ದಿಲೂ.

57. ಕುತ್ತಂ = ವ್ಯಾಧಿ. ಕಿಡಿಕುಂ ಗಡ = ನಾಶಮಾಡುವುದಲ್ಲವೇ. ಅನ್ನರುಂ = ಅಂತಪ್ಪವರೂ. ಒಳರ್ = ಇದ್ದಾರೆ.

58. ಮನದನ್ನಂಗೆ = ಗಂಡನಿಗೆ. ನೆಲೆ = ಸ್ಥಾನ. ಎನವೇೞ್ಕುಂ. ಹೊ. ಗ. ಎನ್ನಬೇಕು.

59. ಕಲ್ಲೋೞ್ಗಳವೋಲ್ = ಕಲ್ಲಹೋಳುಗಳಂತೆ ಬೆರೆಯು

ರ್ = ಸೇರರು. ಅಳವಡುವರ್ = ಸೇರುವರು. ಪಾರದಂಬೊಲ್ = ಪಾದರಸದಹಾಗೆ. ಸುಜನರ್ (ಅಳವಡುವರ್).

60. ಗಾಪಿಲರ್ = ಮೂಢರು. ಗ್ರಾಮೀಣ (ಸ್ಕ್ರ). ಮೇಧಾವಿಗಳ್ = ಬುದ್ಧಿಶಾಲಿಗಳು. ಒಱಲ್ದು—1 ನೆಯ ಪದ್ಯದ ಟಿಪ್ಪಣವನ್ನು ನೋಡಿ. ಸಾಜಂ = ಸಹಜಂ (ಸ್ಕ್ರ). ಮರಾಳಂ = ಹಂಸವು.

61. ಮಾಂಜುವ = ಮರವಾಚುವ. ನಂಜು = ವಿಷವು. ಮೆಯ್ಗರೆಗುಂ = ಅಪಿತುಕೊಳ್ಳುವುದು. ಮೆಯ್ + ಕರೆ. ಕರೆ = ಮರಸು. 2 ನೆಯ ಪದ್ಯದ ಟಿಪ್ಪಣವನ್ನು ನೋಡಿ.

62. ಆರಯೆ = ಆಲೋಚಿಸಿನೋಡಲು. ವಿವೇಕ......ನಂ = ಬುದ್ಧಿಯಿಲ್ಲದ ಮಾತು. ಗುರುತೆಯುಂ = ಗೌರವವನ್ನು. ಎಲ್ಲಿಯುಂ ಗುರುತೆಯುಂ ಎಯ್ದಿದಪಂ—ಎಂದನ್ವಯವು.

63. ಕಲ್ಲದ = ಓದದ. ಹೊ. ಗ. ಕಲಿಯದ. ಸೊಲ್ = ಮಾತು. ಮಿೞ್ತು = ಮೃತ್ಯು. ಅಱಸುಂ = ಧರ್ಮವೂ. ಪೊಲ್ಲಿವಳ್ = ಇವಳು ಕೆಟ್ಟವಳು.

64. ಖೇದ......ರೆ = ದುಃಖದ ಸಾಲು. ಪೋದಿದೊಡಂ =ಹಿಂಸಿಸಿದರೂ. ಆಮೋದಂಗುಂದುಗುಮೆ = ವಾಸನೆಯಲ್ಲಿ ಕಡಮೆಯಾಗುತ್ತದೆಯೇ ? ಸಿರಿಕಂಡಂ = ಶ್ರೀಗಂಧವು. ಅಣಂ = ಸ್ವಲ್ಪವಾದರೂ.

65. ಹರಿಸಮುಂ = ಸಂತೋಷವೂ. ಹರ್ಷ (ಸ್ಕ್ರ). ಆರ್ಪುಂ = ಪರಾಕ್ರಮವೂ. ವಿದ್ಯಾ......ತಿಯುಂ = ವಿದ್ಯೆಗಳಲ್ಲಿ ಪೂರ್ಣಜ್ಞಾನವೂ. ಒಳ್ಪುಂ = ಒಳ್ಳೆಯ ಗುಣವೂ.

66. ಎನ್ನೆವರಂ = ಎಲ್ಲಿಯವರೆಗೆ. ಅಸು = ಪ್ರಾಣವು. ಅನ್ನೆವರಂ = ಅಲ್ಲಿಯವರೆಗೆ. ಮನ್ನಿಸದೆ = ಗೌರವಿಸದೆ, ಲಕ್ಷ್ಯಮಾಡದೆ. ಮಾನಸರ್ = ಮನುಷ್ಯರು. ಕಡಿವನ್ನೆವರಂ = ಕಡಿದುಹಾಕುವವರೆಗೆ. ವಿಟಪಿ = ಮರವು.

67. ತೊಡವು = ಆಭರಣ. ಆಗಸ. ಆಕಾಶ (ಸ್ಕೃ). ನೇಸಱ್ = ಸೂರ್ಯನು. ಅಂಚೆ. ಹಂಸ (ಸ್ಕೃ). ನಂದನಕೆ = ಉದ್ಯಾನಕ್ಕೆ. ಮನೀಷಿಗೆ = ವಿದ್ವಾಂಸನಿಗೆ. ಸಂದ = ಪ್ರಖ್ಯಾತವಾದ.

68. ಪೊಲನಾದ = ಗೋಚರವಾದ. ಬೆಕ್ಕಸಂಬಡವೇಡಂ = ಆಶ್ಚರ್ಯಪಡಬೇಡ. ಅಕ್ಕೆ = ಆಗಲಿ, ಆಪರೇನು ? ನೀಡುಂ = ಉದ್ದವಾಗಿ. ಇತ್ತಪುದೆ = ಕೊಡುತ್ತದೆಯೇ ?

69. ಕಡುಕಿಱಿದು = ಬಹಳ ಚಿಕ್ಕದು. ವಿವುದು—15 ನೆಯ ಪದ್ಯದ ಟಿಪ್ಪಣವನ್ನು ನೋಡಿ. ಕಡೆಗಣ್ಚುವಂ = ಅಸಡ್ಡೆ ಮಾಡುವವನು. ಎಗ್ಗಂ = ಮೂಢನು. ಪಡೆಪರಸು = ಸೈನ್ಯದೊಡನ.

70. ಆವಗಂ = ಯಾವಾಗಲೂ. ಒಡವೆರದೊಡಂ = ಸಂಗಡ ಇದ್ದರೂ. ರೂಢಮೂಲಮಕ್ಕುಮೆ = ಬೇರೂರುವುದೇ ? ನೇಹಂ. ಸ್ನೇಹ (ಸ್ಕೃ). ಪಾವಸೆ. ಹೊ. ಗ. ಪಾಸೆ. ಪದ್ಮಾಕರದೊಳ್ = ಕೊಳದಲ್ಲಿ.

71. ಇತ್ತಪರ್ = ಕೊಡುತ್ತಾರ. ಆಪನ್ನರಾದೊಡಂ = ಕಷ್ಟಕ್ಕೆ ಗುರಿಯಾದಾಗಲೂ. ಬೇಡಲೊಡಂ = ಬೇಡಲು. ಬೇಡಲೊಡಂ ಉಳ್ಳುದಂ ಇತ್ತಪರ್—ಎಂದನ್ವಯವು. ತೊಱೆ = ಹೊಳೆ. ತೊಱೆ (ಕ್ರಿ) = ತ್ಯಜಿಸು. ತೊರೆ (ಕ್ರಿ) = ಸ್ತನ್ಯೇ. ಪಿಪಾಸಿತರ್ಗೆ = ನೀರಡಿಕೆಯಾದವರಿಗೆ. ಬಗರಗೆಯುತ್ತಣಿಂ = ಚಿಲುಮೆಯಿಂದ. 50 ನೆಯ ಪ. ಟಿ. ನೋಡಿ.

72. ಪಸಿ = ಹಸಿದುಕೊಂಡಿರು, ಉಪವಾಸವಿರು. ಒಪ್ಪೊರ್ತು. ಹೊ. ಗ. ಒಪ್ಪೊತ್ತು. ಪಸಿಯುಯ್ = ಉಪವಾಸವಿರುವುದಿಲ್ಲ. ನಿಷೇಧರೂಪ, ಮಧ್ಯಮಪುರುಷೈಕವಚನ, ಅಯ್ ಪ್ರತ್ಯಯ. **ಇಪ್ಪೊರ್ತ್ತುಂಗಂ = ಎರಡುಹೊತ್ತಿಗೂ.** ಬೆಸನಮುಂ. ವ್ಯಸನ

(ಸ್ಕ ೯). ಬಸಿಱೇ = ಹೊಟ್ಟೆಯೇ—ಸಂಬೋಧನ. ಏವೆಂ = ಏಗಯ್ವೆಂ = ಏನುಮಾಡಲಿ ?

73. ವಿದ್ಯಾಪರಿಣತಂ = ವಿದ್ಯೆಗಳನ್ನು ಚೆನ್ನಾಗಿ ಕಲಿತವನು. ಉದ್ಯಮ......ತಂ = ಪ್ರಯತ್ನವನ್ನು ಮಾಡದವನು. ಹೃದ್ಯಫಲಂ = ಮನೋಹರವಾದ ಹಣ್ಣು.

74. ಗಱೆಯಿಸಿ = ಸಂಪಾದಿಸಿ. ಪೋಱ್ದು = ಹೂತು. ಬಯ್ತು = ಬಚ್ಚಿಟ್ಟು.

75. ನಱುಸೆಯ್ಯಂ = ಸುವಾಸನೆಯುಳ್ಳ ತುಪ್ಪವನ್ನು. ಘೋರೆ. 21, 37 ಪ. ಟಿ. ನೋಡಿ. ಪಱೆಯಿಸದ = ಹೋಗಾಡಿಸದ, ಕಳೆಯದ. 8, 31 ಪ. ಟಿ. ನೋಡಿ. ಎಱೆತನಮುಂ = ಸ್ವಾಮಿತ್ವವೂ. ಎಱೆ = ಸ್ವಾಮಿ, ಒಡೆಯ. 4 ಪ. ಟಿ. ನೋಡಿ. ಗುಣಕಱುಗೊಂಡಳಿಂ = ಪ್ರಿಯಳಾದ ಹೆಂಡತಿಯಿಂದ.

76. ಆಯಕ್ಕೆ = ಹುಟ್ಟುವಳಿಗೆ, ವರುಮಾನಕ್ಕೆ. ಕೆಯ್ಗಾಯದೆ = ತಡೆಯದೆ. ಬೀಯಮಂ = ವೆಚ್ಚವನ್ನು. ವ್ಯಯ (ಸ್ಕ ೯). ಆಯತಿಕೆಗಿಡುವಂ = ಗೌರವವನ್ನು ಹೋಗಾಡಿಸಿಕೊಳ್ಳುವನು. ಸ್ತೇಯಿಯೆನಿಪ್ಪಂ = ಕಳ್ಳನೆನಿಸಿಕೊಳ್ಳುವನು ವಿಷಾದಭರಕೆ = ಹೆಚ್ಚಾದ ದುಃಖಕ್ಕೆ. ಎಡೆಯಪ್ಪಂ = ಆಸ್ಪದವಾಗುವನು.

77. ಕಲ್ಪಿಯುಂ = ವಿದ್ಯೆಯೂ. ಪಿ ಪ್ರತ್ಯಯ. ಚಲಮುಂ = ಮನೋದಾರ್ಢ್ಯವೂ. ನಾಣುಂ = ನಾಚಿಕೆಯೂ. ನಲವುಂ = ಸಂತೋಷವೂ. ಎಯ್ದಲೊಡಂ = ಬರಲು.

78. ಅರ್ಥಕಾಂಕ್ಷೆಯಿಂ = ದುಡ್ಡಿನಾಸೆಯಿಂದ. ಸರದೊಳ್ = ಕೊಳದಲ್ಲಿ. ತೀವಲೊಡಂ = ತುಂಬಲು. ಬನ್ನಿಂ. ವಿಧಿರೂಪದ ಮಧ್ಯಮಪುರುಷ ಬಹುವಚನವು. ಧಾ. ಬರ್. ದರ್ದುರಕುಲಮಂ = ಕಪ್ಪೆಗಳ ಸಮೂಹವನ್ನು.

79. ಎರ್ದೆಗೊಂಡಪುದೇ = ಹೃದಯಂಗಮವಾಗುತ್ತದೆಯೇ ? ಮನಸ್ಸಿಗೆ ಒಪ್ಪುತ್ತದೆಯೇ ? ಪ್ರೇಕ್ಷಣವಾಚಾಲತೆಯಿಂದೆ=ನೋಟಕ್ಕೆ ಸಂಬಂಧಪಟ್ಟ ಹರಟೆಯಿಂದ. ನಗೆಗೆ=ಹಾಸ್ಯಕ್ಕೆ. ಪಕ್ಕಾಗಿರನೇ=ಗುರಿಯಾಗದಿರುವನೇ ?

80. ಮೆಲ್ಲಿದುವು=ಮೃದುವಾದುವು. ಮೆಲ್ಲಿತು ಎಂಬುದರ ಬಹುವಚನವು. ಗೆಲ್ಲಂಗೊಳ್ವಂತೆ= ಜಯಿಸುವಂತೆ. ಗೆಲ್ಲಂ =ಜಯವು. ಧಾ. ಗೆಲ್. ಬೆಟ್ಟಿದುವು=ಕಠಿನವಾದುವು. ಬೆಟ್ಟಿತು ಎಂಬುದರ ಬಹುವಚನವು. ಕೊಂಡಪುವೇ. (ಗೆಲ್ಲಮಂ) ಅಧ್ಯಾಹಾರ. ಸಲ್ಲದೆ=ಪ್ರವೇಶಿಸುವುದಿಲ್ಲವೇ ?

81. ಪೂವಡೆ=ಹೂಬಿಡದೆ. ಧಾ. ಪೂ. ಬಗೆಯಱಿವಂ= ಅಭಿಪ್ರಾಯವನ್ನು ತಿಳಿವನು. ಗಾವಿಲಂ—60 ಪ. ಟಿ. ನೋಡಿ. ಏಗೆಯ್ದುಂ=ಏಂ + ಗೆಯ್ದುಂ=ಏನುಮಾಡಿದರೂ.

82. ಎಳವೆಯೊಳ್=ಬಾಲ್ಯದಲ್ಲಿ. ಇಳೇಶ......ಸ್ಥಂ = ದೊರೆಗಳ ಕಿರೀಟದ ಮೇಲಿರುವುದು. ಪಾಲಕಿಯಲ್ಲಿ ಮೇಲೆ ಹಾಕಿರುವ ಬಾಗಿದ ಬಂಬು ಕುಳಿತುಕೊಂಡವರ ತಲೆಯಮೇಲಿರುತ್ತದೆ. ಅಕ್ಕುಂ=ಆಗುವುದು. ಆಗು + ಕುಂ.

---

83. ಜಳಬುದ್ಬುದಂ = ನೀರಿನಗುಳ್ಳೆ. ತೋಯ..... ಗಂ=ಸಮುದ್ರದ ಚಂಚಲವಾದ ಅಲೆ.

84. ದೊರಕೊಳ್ಗುಂ = ಸಿಕ್ಕುವುವು. ಕೀರ್ತಿಲಹರಿ= ಯಶಸ್ಸೆಂಬ ಪ್ರವಾಹವು. ಸರಿದಪುದು=ಓಡಿಹೋಗುತ್ತದೆ. ಆಂತರತಮಂ=ಒಳಗಣ ಕತ್ತಲೆ—ಎಂದರೆ ಅಜ್ಞಾನ. ಬಿಜ್ಜೆ. ವಿದ್ಯೆ (ಸ್ಕ ೨).

85. ಪಡೆಗುಂ = ದೊರೆಯಿಸುವುದು. ಪುದಿದ = ವ್ಯಾಪ್ತವಾದ. ಅಱಿಯವೆ—30 ಪ. ಟಿ. ನೋಡಿ. ಮಾಣಿಕುಂ =

ಹೋಗಾಡಿಸುವುದು. ಎನಿತು, ಎನಿತ್ತು, ಎಂಬ ಎರಡು ರೂಪ ಗಳೂ ಉಂಟು.

86. ಅಪತ್ಯಂ = ಮಗು. ಮಾದ್ಯತ್......ದಂ = ಮ ದಿಸಿದ ಕೋಗಿಲೆಯ ಕಂಠದಿಂದ ಹುಟ್ಟುವ ಮಧುರಸ್ವರಕ್ಕಿಂತ. ಅದಱ = ಆ ಮಗುವಿನ.

87. ಏಮಾಟ್ಟೆ = ಏನುಕೆಲಸಕ್ಕೆ ಬಂದೀತು ? ಏಂ + ಬಾಟ್ಟೆ (ಪ್ರಯೋಜನ). ಕಲ್ಪಿ — 21, 77 ಪ. ಟಿ. ನೋಡಿ. ಪ್ರಸ್ತಾ...... ಡೆ = ಸಮಯಕ್ಕೆ ಒದಗದಿದ್ದರೆ. ಏವುದು— 15 ಪ. ಟಿ. ನೋಡಿ ವಾಗ್ಮಿತೆ = ವಾಚಾಲತೆ. ಇರೆ = ವಾಗ್ಮಿತೆಯಿರೆ. ಸೌವರ್ಣಸುಮ ಕ್ಕೆ = ಚಿನ್ನದ ಹೂವಿಗೆ. ಸೌಸವಂ = ಸುವಾಸನೆ. ಸಮನಿಸದೇ = ಸೇರುವುದಿಲ್ಲವೇ ?

88. ಆರ್ಪುಂ = ಕೂಗೂ. ಧಾ. ಆರ್. ನೆಲಕಲನ = ಲೋ ಭಿಯ.

89. ಸರಸತಿ. ಸರಸ್ವತಿ (ಸ್ತ್ರೀ). ಅರಲಿಚಂ = ಅರಲ್ + ಇಚಂ = ಪುಷ್ಪದಲ್ಲಿ (ಕಮಲದಲ್ಲಿ) ಹುಟ್ಟಿದವನು, ಬ್ರಹ್ಮನು. ಇಚ ಪ್ರತ್ಯಯವು ಅಲ್ಲಿ ಹುಟ್ಟಿದವನು ಎಂಬರ್ಥದಲ್ಲಿ ಬರುತ್ತದೆ. ಇತರೋ ದಾಹರಣಗಳು-ಪೊೞಲಿಚಂ (ನಗರದಲ್ಲಿ ಹುಟ್ಟಿದವನು), ಕಾಲುರಿ ಚಂ (ಕಾಲೂರಲ್ಲಿ ಎಂದರೆ ಹಳ್ಳಿಯಲ್ಲಿ ಹುಟ್ಟಿದವನು) ಇತ್ಯಾದಿ. ಒಡ ರಿಪ = ನಿರ್ಮಿಸುವ. ನಶ್ವರಂ = ನಾಶವಾಗತಕ್ಕುದು. ಕವಿಯಾ = ಕವಿನಿರ್ಮಿತವಾದ. ಷಷ್ಠಿಗೆ ದೀರ್ಘವೂ ಉಂಟು .

90. ಓವದೆ = ಕಾಪಾಡದೆ. ಧಾ. ಓವು. ಕಲ್ತುದಂ ಓವದೆ —ಎಂದನ್ವಯವು. ತಡಮಾಡಿದಪಂ = ಭ್ರಾಂತನಾಗುತ್ತಾನೆಯೋ. ಏವದೆ = ದುಃಖದಿಂದ. ಗಾಂಪನಂ = ಮೂಢನನ್ನು .

91. ಇನಿನುಡಿಯಂ = ಮಧುರಭಾಷಿ. ನೋಡ. 25 ಪ.

ಟಿ. ಸೋಡಿ. ಬೆಳ್ತನಂ=ಮೌಢ್ಯವು. ಎಂತೋ=ಯಾವರೀತಿ ಯಾದುದೋ! ಯಾವಬಗೆಯದೋ!

92. ಕೃತವಿದ್ಯಂಗೆ = ವಿದ್ಯಾವಂತನಿಗೆ. ಪಾಂಡಿತ್ಯಮಂಡನಂ = ಪಾಂಡಿತ್ಯವೆಂಬ ಆಭರಣವು. ಮಾರತ್ನದ = ಮಹಾರತ್ನದ (ಸ್ಕಂ).

93. ತಮ್ಮಿಂದೆ. ಹೊ. ಗ. ತಮಗಿಂತ. ಒಡಮೆ=ಸೊತ್ತು. ತಿಳಿದರ್=ಜ್ಞಾನಿಗಳು (ಕರ್ತೃ).

94. ನಿಸ್ಸ್ವರುಂ=ದರಿದ್ರರೂ. ಅಂದೆ=ಆಗಲೇ. ಎಂದು =ಯಾವಾಗ. ಆನತರಪ್ಪರ್=ಬಾಗುವರೋ. ಧನಿಕರುಂ ಅಱಿದರುಂ ತಮಗೆ ನಿಸ್ಸ್ವರುಂ ತಿಳಿಯದರುಂ ನಿರವಂ ಬಾಗಿಪವೋಲ್ ತಾಮುಂ ಎಂದು ಆನತರಪ್ಪರ್ ಅಂದ ಸಿರಿಯುಂ ವಿದ್ಯಾಶ್ರೀಯುಂ ಸಿರಿಯೆನಿಸುವುದು – ಎಂದನ್ವಯವು.

95. ಇದಿರಾಂತು = ಪ್ರತಿಭಟಿಸಿ. ಪೊಡವಿ. ಪೃಥ್ವೀ (ಸ್ಕಂ). ಪೊಗೞ್ವನಂ=ಹೊಗಳಲು. ಎಱಪರ್=ಎರಗುವರು, ಬಾಗುವರು. ತುಲೆಯೊಳ್=ತಕ್ಕಡಿಯಲ್ಲಿ.

96. ಅಕ್ಕರಿಗರ=ವಿದ್ವಾಂಸರ. ಬೆರ್ಚಂ=ತೃಣಪುರುಷನನ್ನು. ಚೆಕ್ಕನೆ=ಬೇಗನೆ. ಬೆರ್ಚಂ ಪಕ್ಕಿಗಳಂತೆ=ಬೆರ್ಚಂ ಕಂಡು ಪಕ್ಕಿಗಳ್ ಅಳ್ಕುವಂತೆ. ಕಂಡು ಚೆಕ್ಕನೆ ಅಳ್ಕಬೇಡಿಂ – ಎಂದನ್ವಯವು.

97. ಕಿಱಿಯರ=ಮಕ್ಕಳ. ಉಱೆ=ಹೆಚ್ಚಾಗಿ. ಪುಂಜಿಸಿ =ತುಂಬಿ. ಪೊಣ್ಮದು=ಹುಟ್ಟುವುದಿಲ್ಲ. ಬೊಬ್ಬಿಱಿವನೊ=ಕೂಗಿಕೊಳ್ಳುವನೋ. ಕಲ್ಪಾಯ್ತಂ=ಕಲ್+ಆಯ್ತಂ (ಪ್ರತ್ಯಯ)= ಉಪಾಧ್ಯಾಯನು. ಪಾಂಗಱಿದು = ಶಿಕ್ಷಾಕ್ರಮವನ್ನು ತಿಳಿದು. ಪಾಂಗು=ಕ್ರಮ. ಉಣ್ಮುವಂತು=ಹುಟ್ಟುವಹಾಗೆ.

98. ಬೀಗಿದೊಡೆ = ಗರ್ವಪಟ್ಟರೆ. ಮಾನವಪತಿಯ = ನರಪತಿಯ=ರಾಜನ. ಅಂತವುರದೊಳ್. ಅಂತಃಪುರ (ಸ್ಕಂ).

99. ಹದಿಬದೆ. ಪತಿವ್ರತೆ (ಸ್ಕ೨). ಸದಪತ್ಯಕೆ=ಸತ್ಪುತ್ರನಿಗೆ. ತಂದೆತಾಯ್ವಿರ್ - ಇರ್ ಬಹುವಚನ ಪ್ರತ್ಯಯ. ಉದರಂಭರಿಗೆ=ಸ್ವಾರ್ಥಪರನಿಗೆ.

100. ಪಂದೆಗೆ=ಹೇಡಿಗೆ. ಕೆಯ್ದುಗಳ್=ಆಯುಧಗಳು.

101. ಪ್ರಜೆಗಳಂ ಕೊರಗಿಸಿ – ಎಂದನ್ವಯವು. ಉಡುಪತಿ =ನಕ್ಷತ್ರಪತಿ=ಚಂದ್ರನು. ಜಪ್ಪೆದು=ಬಯ್ದು. ಪಲ್ಕಸೆವಂ= ಹಲ್ಲುಕಚ್ಚುವವನು. ಜವಂ. ಯಮ (ಸ್ಕ೧).

102. ಉಡುವುವಂ=ಉಡಲ್ಪಡುವ ವಸ್ತ್ರಗಳನ್ನು. ಉಣ್ಬುವಂ=ಉಣ್ಣಲ್ಪಡುವ ಆಹಾರಗಳನ್ನು. ಎಡಱುವರಂ=ವಿರೋಧಿಗಳನ್ನು. ಒಱಗುವ=ಮಲಗುವ. ಸುಯ್ವ=ಉಸಿರುಬಿಡುವ. ದಲ್=ನಿಶ್ಚಯ.

103. ಕೆಲದರ್=ಪಕ್ಕದವರು. ನಿಜದಂ=ನಿಜ. ಕೋಡು =ಕೊಂಬು. ಅರ್ಥಾಂತರ, ದಾನ.

104. ಅತ್ಯಾಹಿತಂ=ಮಹತ್ತಾದ ಅಪಾಯ. ಆರ್ಪನೇ= ಬಲ್ಲನೇ? ಧಾ. ಆಱು. ಅಜಗರಂ=ಹೆಬ್ಬಾವು. ದವಾಗ್ನಿ=ಕಾಡುಗಿಚ್ಚು. ಅಳುರಯುಂ=ಆವರಿಸಿದರೂ.

105. ಪಗೆ=ದ್ವೇಷ. ಕೆಳೆಯೊಳ್=ಸ್ನೇಹಿತನಲ್ಲಿ. ಕೆಳೆ= ಸ್ನೇಹ. ಪಗೆಯೊಳ್=ಶತ್ರುವಿನಲ್ಲಿ. ನಗೆ=ಹಾಸ್ಯ. ಚೆಲ್ಲವತ್ತರೊಳ್ = ನಂಬಿಸಿ ತಿಂಬವರಲ್ಲಿ. ಬದರ್ಗರೊಳ್ = ಪ್ರೌಢರಲ್ಲಿ. ಜಬ್ರ್=ನಿಂದೆ, ಅಹಂಕಾರದ ಮಾತು.

106. ತಿರಗೆ=ಭೂಮಿಗೆ, ನೆಲಕ್ಕೆ. ಸ್ಥಿರಾ (ಸ್ಕ೩).

107. ಮಱೆವೊಕ್ಕವರಂ = ಶರಣಾಗತರನ್ನು. ನಿಜ...... ಯಂ=ತಮ್ಮ ದೇಹವು ನಿತ್ಯವಲ್ಲ ಎಂಬುದನ್ನು. ಬಱಮೆಯ್ಯಂ —ಬಱಿದು+ಮೆಯ್. ಜಸದಿಂ—ಯಶಸ್ (ಸ್ಕ೨). ಪಡೆವರ್= ಪಡೆವವರು (ಕರ್ತೃ). ಮಱೆದಪರೇ (ಕ್ರಿಯೆ).

108. ಈಡಾಡಿಯುಂ=ತ್ಯಜಿಸಿಯೂ, ಬಿಟ್ಟೂ. ಉಚಿತ ಮೆ ವಲಂ = ಉಚಿತವೇ ಸರಿ. ಎಂದಾನುಂ = ಯಾವಾಗಲಾದರೂ. ಅವಸಾನಂ = ನಾಶವು. ಅಲ್ಲಂ = ಉಚಿತವಲ್ಲ.

109. ಅಂತುಟೆ = ಅಂತೆ = ಹಾಗೆಯೇ. ತೆಗಳೆ = ನಿಂದಿಸಲು. ಇಂತುಟು = ಇಂತು = ಹೀಗೆ. ಓಲಗಿಸುಗುಂ = ಸೇವಿಸುವುದು. ಮಾನಧನರ್ = ಮಾನವನ್ನೇ ಆಸ್ತಿಯಾಗಿ ಉಳ್ಳವರು. ಮನಸ್ವಿಗಳ್ = ಮನೋದಾರ್ಢ್ಯವುಳ್ಳವರು.

110. ಮತ್ತ......ತೆಯಂ = ಮದಿಸಿದ ಅರಸರ ದುರಾಚರಣೆಯನ್ನು. ಸೂಕ್ತಿಯಿಂದೆ = ಒಳ್ಳೆಯಮಾತಿನಿಂದ. ಕಿಡಿಸುಗೆ=ಹೋಗಾಡಿಸಲಿ. ತನತ್ತು = ತನ್ನ. ತನತು ಎಂದೂ ಉಂಟು. ಚತುರಹಸ್ತಿಪಕಂಬೋಲ್ = ಜಾಣಮಾವಟಿಗನಹಾಗೆ.

111. ಅಜ್ಞಪ್ರಲಪಿತಂ = ತಿಳಿಯದವರ ಮಾತು. ಅಂತಿರ್ಕೆ = ಹಾಗಿರಲಿ. ಗೆಲ್ಲನೆ = ಗೆಲಲಿಲ್ಲವೇ ? ಮೃಕಂಡುಸುತಂ= ಮಾರ್ಕಂಡೇಯನು.

112. ಎಡೆಯುಂ = ಸ್ಥಾನವನ್ನು. ಆದಿಯುಂ = ಉಪಕ್ರಮವನ್ನು. ಪರಿಣತಿಯಂ = ಪರ್ಯವಸಾನವನ್ನು. ಉಪಕರಣಮಂ = ಸಹಾಯಸಾಮಗ್ರಿಯನ್ನು. ತಱಿಸಂದು = ಮನೋದಾರ್ಢ್ಯದೊಡನೆ. ಧಾ. ತಱಿಸಲ್. ಅಮೋಘಂ = ವಿಫಲವಲ್ಲ.

113. ಆಲಿಸರ್=ಕೇಳರು. ಮಾನಸಮಂ ಆಕಂಗೊಂಡ= ಮನಸ್ಸುಲೀನವಾಗಿರುವ. ತೊಂಕಡಿಸರ್. ಹೊ. ಗ. ತೂಕಡಿಸರು.

114. ಅೞ್ಕಜಂಬಡುತ್ತುಂ = ಅಸೂಯೆಪಡುತ್ತ. ಬಿಚ್ಚಟಿಪ = ವಿಸ್ತರಿಸುವ. ವಿಗ್ರಹಳಂ = ಗಾಯಗಳನ್ನು. ಚಿಕಿತ್ಸೆಯಿಂ ಕಳೆಯದ—ಎಂದನ್ವಯವು.

115. ದುರ್ವಿನಯಮುಂ = ಔದ್ಧತ್ಯವೂ, ದುರಾಚರಣೆಯೂ,

116. ಬಿಱುಮಾತು = ಬೆಟ್ಟಿತು + ಮಾತು. ನಿಷ್ಠುರವಾದ ಮಾತು. ಕೊಂಡೆಯಂ = ಚಾಡಿ. ಸಟೆ = ಸುಳ್ಳು. ಬಱುವಾತು = ಬಱಿದು + ಮಾತು = ವ್ಯರ್ಥವಾದ ಮಾತು. ಶೀಲಂ = ಒಳ್ಳೆಯ ನಡತೆ.

117. ಬಂಬಲಬಾಡಿಯುಂ = ಹೆಚ್ಚಾಗಿ ಬಳಲಿದ್ದರೂ. ಪಸವಟ್ಟುಂ = ಶ್ರಾಂತವಾಗಿದ್ದರೂ. ಪೞುವೊಳ್ = ಕಾಡಿನಲ್ಲಿ.

118. ಪಾರ್ದು = ನಿರೀಕ್ಷಿಸಿ. ಕಾಡುವಂ = ಹಿಂಸೆ ಮಾಡುವನು.

119. ಏಪಿರಿದು = ಏಂ + ಪಿರಿದು = ಏನು ದೊಡ್ಡದು? ಅಮಿತೇಂಧನಮುಂ = ಹೆಚ್ಚಾದ ಸವುದೆಯನ್ನು. ಗುಣಸಂಧಿ. ನಿವೃತ್ತಿಯುಂ = ತೃಪ್ತಿಯನ್ನು, ನಿವಾರಣವನ್ನು.

120. ವರ್ತಿಸುತ್ತೆ = ನಡೆಯುತ್ತೆ. ಏಪೊಱ್ತುಂ = ಯಾವಾಗಲೂ. ದಿವ್ಯಿಮರಿಂದಮೆ = ಮಹಾತ್ಮರಿಂದಲೇ. ಸೊಗಂ—ಸುಖ (ತ್ಭ).

121. ಮೆಲ್ನುಡಿ-ಮೆಲ್ಲಿತು + ನುಡಿ. ಅಸದಳಂ = ಅಸಾಧ್ಯ.

122. ಮರುಳರ್ = ಹುಚ್ಚರು. ವರಾಕರ್ = ತುಚ್ಛರು.

123. ತೊಯ್ದೊಡಂ = ಮುಳುಗಿದರೂ. ಬಿನ್ನನೆ = ಸುಮ್ಮನೆ. ಇರ್ಪ ಗುರುವಿನ ದಾಕ್ಷಿಣ್ಯಂ = ಎಂದನ್ವಯವು. ಬೇಗುಂ = ತಪಿಸುವುದು. ಧಾ. ಬೇ.

124. ಇನಿತು = ಇಷ್ಟು, ಸ್ವಲ್ಪವೂ. ಪೊಗೞ್ದಪರ್, ಪೊಗೞ್ವಪ್ಪರ್, ಎಂಬ ಎರಡು ರೂಪಗಳೂ ಉಂಟು.

125. ದಯಿತಪ್ರೇಮಮುಂ = ಗಂಡನಲ್ಲಿ ಪ್ರೀತಿಯನ್ನು. ಪೊಸುತೆ = ಅಂಗಲೇಪವಾಗಿ ಹಚ್ಚಿಕೊಳ್ಳುತ್ತೆ. ನಾಣಂ = ಲಜ್ಜೆಯನ್ನು. ಇನಿಯಂಗೆ = ಗಂಡನಿಗೆ. ಕೃತಿ = ಧನ್ಯನು.

126. ಕಂಚುಕಂ=ಕವಚವು. ಪಳಂಚಲೆವುದೆ=ಹೋಗಾಡಿಸುತ್ತದೆಯೋ? ಚಳಿಯುಂ ಪಳಂಚಲೆವುದೆ—ಎಂದನ್ವಯವು.

127. ಅಮಿತಾ......ಳಗ = ಮಿತಿಮೀಱಿದ ಸಂತೋಷದ ಪ್ರವಾಹದಲ್ಲಿ. ಓಲಾಡದಿರು=ಮುಳುಗಾಡದಿರು. ನಿನತ್ತು=ನಿನ್ನ. ನಿನತು ಎಂದೂ ಉಂಟು. ಈ ಪದಗಳಿಗೆ ನಿನ್ನದು ಎಂಬುದೇ ಸಾಧಾರಣವಾದ ಅರ್ಥ. ದೇವಂ=ದೇವರು.

128. ಪಱೆಯುಂ=ತಮಟೆಯನ್ನು, ಡಂಗುರವನ್ನು. ಪರೆ=ಪದರ. ಪರೆ (ಕ್ರಿ)=ಹರಡು, ಪ್ರಸರಿಸು.

129. ಬಲ್ಲಿದಂ=ಸಮರ್ಥನು. ಇಳೆ=ಜನರು ಪೊಲ್ಲಿದಂ=ದುರ್ಬಲನು. ಪಲ್ಲಮುಱಿ=ಆನೆಯುಮುರಿ. ಕಿತ್ತಿಱುಪ—ಕಿಱಿದು + ಇಱುಪ. ಇಱುಪ, ಇಱುಂಪ, ಎಂಬ ಎರಡು ರೂಪಗಳೂ ಉಂಟು.

130. ನನೆ=ಮೊಗ್ಗು. ತನಿವಣ್=ಪಕ್ವಫಲ. ಚಾಗಂ=ತ್ಯಾಗ (ಸ್ಕೃ). ನೋಟಂ ನನೆ, ನಗೆಮೊಗಂ ಅಲರ್, ಇನಿವಾತು ಇನಿಗಾಯ್, ಉಪಚಾರಂ ದೋರೆವಣ್, ಚಾಗಂ ತನಿವಣ್ಣುಂ, ಆಗೆ—ಎಂದನ್ವಯವು.

131. ಆರಯ್ಯ=ಆಲೋಚಿಸು. 25 ಪ. ಟಿ. ನೋಡಿ. ಬುಲ್ಲವಿಸಿ=ಬೀಗಿ. ಬೆಱೆಯುಪೇೞ್ಪುದೆ. ಹೊ. ಗ. ಬೆರೆಯಬೇಕೇ?

———

132. ತಿಂಗಳ್ = ಚಂದ್ರನು. ಅರ್ಥಾಂತರ—ವಾಸ. ಅನ್ವಯಮಂ = ವಂಶವನ್ನು.

133. ಒಗೆದೊಡೆ = ಹುಟ್ಟಿದರೆ. ಸಾಲ್ಗುಂ. ಹೊ. ಗ. ಸಾಕು. ಒನೆಱೆವಱೆಯಿಂದೆ = ಒಬ್ಬ ಪೂರ್ಣಚಂದ್ರನಿಂದ. ಪಱೆ = ಚಂದ್ರ. ಪೆರ = ಹಾವಿನ ಸೋಲೆ. ಮೀಂಗಳಿಂದೆ = ನಕ್ಷತ್ರಗಳಿಂದ.

134. ಪತಿ......ದಿಂ = ಗಂಡನಿಗೆ ಹಿತವಾದ ನಡತೆಯಿಂದ. ಶಮದೆ = ಸ್ವೈರಣೆಯಿಂದ.

135. ಅದವೞುಂ = ದುಃಖವನ್ನು. ಮದಿರೆಯುಂ = ಸಾರಾಯುವನ್ನು.

136. ರಸದಿಂತುಱುಗಿದ=ರಸಭರಿತವಾದ. ಒಱಲ್ದು. 1 ಪ. ಟಿ. ನೋಡಿ. ನಱು..... ಲ = ಸುವಾಸನೆಯುಳ್ಳ ಹೂಗೊಂಚಲ. ಕೋಡಂ = ಕೋತಿ.

137. ಪಡೆದರಂತಿರೆ = ಪಡೆದವರಹಾಗೆ. ಬಂಜೆಯರ್. ವಂಧ್ಯಾ (ಸ್ತ್ರೀ). ಸೂಲೞಲಂ = ಪ್ರಸವವೇದನೆಯನ್ನು.

138. ಪತ್ತುಗೆಗೊಳ್ಳದ = ನೆಲಸದ. ಹೊತ್ತಗೆ—ಪುಸ್ತಕ (ಸ್ತ್ರೀ). ಕಡವರಮುಂ = ಧನವೂ, ಹೊನ್ನೂ. ನೆರವಾದಪುವೆ = ಸಹಾಯವಾಗುತ್ತವೆಯೇ ?

139. ಇನಿವಾಲಂ=ಇನಿದು + ಪಾಲ್. ತುಱು= ಹಸು. ಅಪಾತ್ರ......ಣಂ=ತಗದವರಿಗೆ ದಾನವು. ಅಗುಣಂ=ದೋಷ, ವ್ಯರ್ಥ.

140. ಬೇಡ್ಪರ = ಬೇಡುವವರ. ವನನಿಧಿಯೊಳ್ = ಸಮುದ್ರದಲ್ಲಿ. ತೊಣೆ = ಸಮಾನ.

141. ನಿಟ್ಟಿಸಿ=ನೋಡಿ. ನೆಱೆ=ವಿಶೇಷವಾಗಿ. ಎಡ್ಡಂ= ಮನೋಹರ. ನಱುಗಂಪಂ = ಒಳ್ಳೆಯ ವಾಸನೆಯನ್ನು. ಮುಟ್ಟಗದ—ಹೊ. ಗ. ಮುತ್ತಗ.

142. ಅಣಂ = ಸ್ವಲ್ಪವೂ. ಸೊಣಗಂ = ನಾಯಿ. ಶುನಕ (ಸ್ತ್ರೀ).

143. ವನಜಜಮುಂ = ಕಮಲವೂ. ಆವಲುಂ = ಬೆಸ್ನೆಯಿದ್ದಲೂ.

144. ಜೊನ್ನದಂತೆವೊಲ್ = ಬೆಳ್ದಿಂಗಳಹಾಗೆ. ಜ್ಯೋತ್ಸ್ನಾ (ಸ್ಕೃ). ಅಱಿವೆಸಕಂಬೋಲ್ = ಬುದ್ಧಿಪ್ರಕಾಸದಹಾಗೆ. ತೆಱೆ (ಕ್ರಿ) = ಬಿಡು, ಬಿಚ್ಚು. ತೆರೆ = ಅಲೆ, ಪರದೆ. ಅಱಿ = ತಿಳಿ. ಅರಿ = ಕತ್ತರಿಸು.

145. ನೀಡುಂ = ಹೆಚ್ಚಾಗಿ. ಕೋಡದ = ಹಿಂದೆಗೆಯದ. ಮಂಡೂಕಂಬೋಲ್ = ಕಪ್ಪೆಯಹಾಗೆ.

146. ಉರಿವರ್ = ತಪಿಸುವರು. ವನಮಂ = ನೀರನ್ನು. ಪಳಿಕು—ಸ್ಫಟಿಕ (ಸ್ಕೃ). ಮೆಲ್ಲನೆ ಊದೆ ಪಳಿಕು ವನಮಂ ಉಗುೞ್ಗುಂ—ಎಂದನ್ವಯವು.

147. ಮಗಮಗಿಪಿ = ಸುವಾಸನೆಯನ್ನು ಬೀರಿ. ಕುಳಿರ್ವ = ತಣ್ಣಗಿರುವ. ಧಾ. ಕುಳಿರ್. ಪಾಸಟಿ = ಸಮಾನ. ಬೆಗಡಂ = ಭಯವನ್ನು. ಜಗಗೆ ಬೆಗಡಂ ಪಡೆಯದೆ ?—ಎಂದನ್ವಯವು.

148. ನೈಸರ್ಗಿಕಂ = ಸ್ವಭಾವಸಿದ್ಧವಾದುವು. ಆಗಂತುಕಂಗಳ್ = ಮಧ್ಯೇ ಬಂದುವು. ಉಳ್ಳಿಯೊಳ್ = ನೀರುಳ್ಳಿಯಲ್ಲಿ. ಎರ್ದೆಗೊಳ್ವ = ಮನೋಹರವಾದ.

149. ಪೊನಲಂತೆ = ನದಿಯಂತೆ. ಅಂತೆ, ಅಂತಿರೆ, ಎರಡೂ ಉಂಟು.

150. ಇವಱಿಂದ = ಇವುಗಳಿಂದ. ಓಸರಿಸದೆ = ತಪ್ಪದೆ. ಅವಿನೇಯಂ = ತಿದ್ದಲಿಕ್ಕಾಗದವನು.

---

151. ರಸೆಯೊಳ್ = ಭೂಮಿಯಲ್ಲಿ. ನೆಲವೀಡು = ವಾಸಸ್ಥಾನವು.

152. ಸೌಹೃದಮಂ = ಸ್ನೇಹವನ್ನು. ಪಗೆಯಂ (ಪಡೆಗುಂ). ಇಂಚರಂ = ಇನಿದು + ಸರಂ = ಮಧುರಸ್ವರ. ಗರ್ದಭದಾ—ಷಷ್ಠಿಗೆ ದೀರ್ಘವೂ ಉಂಟು.

153. ಬಗೆಗುಂದದೆ = ಎದೆಗೆಡದೆ. ಸುಗಿಯದೆ = ಹೆದರದೆ.

154. ಮಹಿಮಾವಾಸನ = ಮಹಿಮೆಗೆ ನೆಲೆಯಾದವನ.

155. ಪಿನಾನುಂ = ಹೊ. ಗ. ಪಿನಾದರೂ. ಆನಲ್ = ಉಪಕ್ರಮಿಸಲು. ತಱಿಸಲ್ಕೆ = ನಿಶ್ಚಯಿಸುವ. ಮುಂ = ಮುಂದೆ. ಅಱಿದನಂತಿರೆ = ಕೊಂದವನಹಾಗೆ. ನಕುಲನಂ = ಮುಂಗುಸಿಯನ್ನು.

156. ಮುಣಿಗುಂ = ಬಗ್ಗುವುದು, ಹೆದರುವುದು.

157. ಎಯ್ದುಲೊಡಂ = ಹೋಗಲು. ಮಡಿವಳ್ಳನ = ಅಗಸನ. ವಳ್ಳ—ಪ್ರತ್ಯಯ. ವಳ ಎಂದೂ ಉಂಟು. ದಿಗಂಬರರ = ಬತ್ತಲೆ ಇರುವವರ.

158. ಓರಗೆ = ಸಮಾನರು. ಕಾಚಂ = ಗಾಜು.

159. ಆದಂ = ಹೆಚ್ಚಾಗಿ. ಜಱುಚುವರ್ = ಗದರಿಸುವರು. ನೆಱೆದಿರ್ಪುದೊ = ನೆಱೆದಿರ್ದ ಘಟವೊ. ಉಲಿಗುಂ = ಸದ್ದಾಗುವುದು. ಅಳುಂಬಂ = ಹೆಚ್ಚಾಗಿ.

160. ಪಲಸೊಡರಂ—ಪಲವು + ಸೊಡರ್.

161. ನಿಕ್ಕುವಮಂ = ಸತ್ಯವನ್ನು. ಮಾಮಸಕದ = ಬಹಳ ಹೆಚ್ಚಾದ. ತಿತಿಕ್ಷೆಯಂ = ಸೈರಣೆಯನ್ನು. ಪಿಶುನತೆಯಿಂ = ಚಾಡಿಯಿಂದ, ನಿಂದೆಯಿಂದ. ವಿವೇಕ..... ಙರ್ = ವಿವೇಕದಿಂದ ಪ್ರಜ್ವಲಿಸುವಹಾಗೆ ಮಾಡಲ್ಪಟ್ಟ ಬುದ್ಧಿಯುಳ್ಳವರು.

162 ವ್ಯತಿಯಂ = ಬೇಲಿಯನ್ನು. ಆನಿಪ = ಆಗಿಸುವ. ಬಬೂರ್ಲರವಪ್ಪೋಲ್ = ಬೊಬ್ಬುಲಿಯ ಮರದಂತೆ.

163. ಮರಲಂ = ಪುಷ್ಪವನ್ನು. ಮರಂದಮಂ = ಮಕರಂದವನ್ನು. ದಾತಾರರ—ಸಂಸ್ಕೃತದ ಪ್ರಥಮಾಬಹುವಚನವಾದ ದಾತಾರಃ ಎಂಬುದು ವಿಸರ್ಗವನ್ನುಳಿದು ಕನ್ನಡಕ್ಕೆ ಲಿಂಗವಾಗಿದೆ.

164. ಜಡಿದು = ಹೆದರಿಸಿ. ಕಬ್ಬುಗ—ಹೊ. ಗ. ಕಬ್ಬು.

165. ಎಸಕದೊಳಂ = ಕೆಲಸದಲ್ಲಿಯೂ. ಎಸಕಂ—ಅರ್ಥಾಂತರ, ಪ್ರಕಾಶ. ಅಂತಶ್ಛದ್ಮರ್ = ಮನದೊಳಗೆ ಕಪಟವುಳ್ಳವರು.

166. ಒಡವೆರೆದ = ಒಡನೆ + ಬೆರೆದ = ತನ್ನನ್ನು ಸೇರಿದ. ರುಗುಡದೆ = ದುಃಖದಿಂದ.

167. ಅನ್ನಂ = ಅಂತಪ್ಪಂ, ಅಂತಹಂ. ಹೊ. ಗ. ಅಂಥವನು. ರೋಚಕಂ = ಇಸಿದು. ಅಮರ್ದುಂ = ಹಾಲೂ. ಅಮೃತ (ಸ್ಕೃ). ಇಳೆಗೆ = ಜನಗಳಿಗೆ. ಕಳ್ = ಹೆಂಡ.

168. ಇನಿಪಾಲ್ = ಇನಿದು + ಪಾಲ್. ಠಾಣ—ಸ್ಥಾನ (ಸ್ಕೃ). ಕಳ್ (ಬೆಲೆವಡೆಗುಂ).

169. ಕುಱಿಪು = ಗುರುತು. ಪಡಿಂಚುಱಿವಕ್ಕಿಯುಂ = ಕೋಗಿಲೆಯನ್ನು.

170. ಇಂಗಿತಮುಂ = ಮನೋಭಾವವನ್ನು. ಕೇಳಲೊಡಂ (ಇತ್ತಪಂ). ಪಲಸೂಟ್ = ಹಲವುಸಾರಿ. ಅಥಮುಂ ಪಲಸೂಟ್ ಸುತ್ತಿಸಿ ಇತ್ತಪಂ—ಎಂದನ್ವಯವು.

171. ಸಂತಂ = ಸತ್ಪುರುಷನು. 163 ಪ. ಟಿ. ನೋಡಿ. ಅದವಟಲಂ (ಮಾಟ್ಪಂ).

---

172. ರಥಾಂಗಂಬೊಲ್ = ಚಕ್ರದಹಾಗೆ. ಎರಪಿಲ್ಲದೆ = ಭೇದವಿಲ್ಲದೆ.

173. ರವಿ......ನಂ = ಸೂರ್ಯನೇ ಆಳವ ಬಳ್ಳವಾಗಲು. ಇರ್ಪನ್ನೆವರಂ = ಹೊ. ಗ. ಇರುವವರೆಗೂ.

174. ಜನಂ ಕಾಟ್ಗೆಡೆಯೆ = ಜನರು ನಿಂದಿಸಲು.

175. ಕಡು......ಗಿ = ದೇಹವನ್ನು ಬಹಳ ಕಷ್ಟಕ್ಕೆ ಗುರಿಮಾಡಿ. ಸಂಗಡಿಸಿದ = ಸೇರಿಸಿದ.

176. ಎಳೆಯರೆಂ = ಎಳೆಯ ವರಾಗಿದ್ದೇವೆ. ಎಳೆಯಂ ಎಂಬ ನಾಮಪದಕ್ಕೆ ಉತ್ತಮಪುರುಷಬಹುವಚನದ ಆಖ್ಯಾತವಿಭಕ್ತಿ ಬಂದಿದೆ. ಶಬ್ದಮಣಿದರ್ಪಣ. ಸೂ. 219. ಉದಿರ್ಗುಂ ಗಳ = ಉದಿರುವುದಲ್ಲವೇ. ಗಳ, ಗಡ, ಎರಡೂ ಉಂಟು. ಕಡುಪಿಱಿಂಗಾಳಿ = ಕಡಿದು + ಬೆಟ್ಟಿತು + ಗಾಳಿ.

177. ಇದೆ ನಿಂದಂ = ಈಗತಾನೆ ನಿಂತನು. ಪೊಂದಿದಂ = ಸತ್ತನು. ನಂಟನ್ ಅಱಿತೆ ಪೊಂದಿದಂ—ಎಂದನ್ವಯವು. ತಳ್ವದೆ = ಸಾವಕಾಶಮಾಡದೆ.

178. ಕಾಲಂ = ಮೃತ್ಯು. ಕಾಲದೊಳ್ = ಸರಿಯಾದ ಕಾಲದಲ್ಲಿ. ಪಡೆದನ್ ಅಱುಲನ್—ಎಂದನ್ವಯವು

179 ವಿಹಾಯಮುಮಂ = ಆಕಾಶವನ್ನು

180. ಮಬ್ಬು = ಕತ್ತಲೆ. ಹೊ. ಗ. ಮಬ್ಬು. ಮಸುಳೆ = ಮಂಕಾಗಲು. ಸುಮ್ಪು = ಪುಣ್ಯ, ಸದಾಚಾರ.

181. ಆಮುತ್ರಿಕದೊಳ್ = ಪರಲೋಕದಲ್ಲಿ. ಸಮ್ಮನಿಕುಂ = ಉಂಟಾಗುವುದು. ಸಮನಿಕುಂ ಎಂದೂ ಉಂಟು. ಉಮ್ಮಳಿಪುದುಂ = ತಪಿಸುವುದೂ.

182. ತೋಲ್ = ಚರ್ಮ. ಇವಕ್ಕೆ = ಇವುಗಳಿಗೆ. ಅೞ್ದುವ = ಮುಳುಗುವ. ಹೊ. ಗ. ಅದ್ದುವ ಆಳ್ದಂ = ಸ್ವಾಧೀನಪಡಿಸಿದವನು. ತವಿಲ್ಲದ = ಕುಂದದ.

183. ಕಾಯುತೆ = ಕೋಪಿಸುತ್ತ. ಧಾ. ಕಾಯ್. ಕಾಯದೆ = ಅಡಗಿಸದೆ. ಧಾ. ಕಾ. ಕಾಱ್ನುಡಿ = ಕೆಟ್ಟಮಾತು, ಬೈಗುಳ. ಕಾಯ್ಪು = ಕೋಪ.

184. ಕನಲುತೆ = ಕೋಪಿಸುತ್ತ. ಕೀೞ್ = ನೀಚನು. ಉಗಿಬಗಿಯಾಗುತೆ = ಮೈಯೆಲ್ಲಾ ಚಿನ್ನಬಿನ್ನವಾದಂತೆ, ಮೈಯೆಲ್ಲಾ ಬೆಂಕಿಯಾಗಿ ಸಱುತ್ತ = ರೇಗಿ.

185. ತಿಟ್ಟಿ = ಬ್ಯೆಯುಲು. ಮೂಗುವಟ್ಟಂತೆ = ಮೂಗರಹಾಗೆ. ಸಂತರ್ ಮೂಗುವಟ್ಟಂತಿರ್ಪರ್—ಎಂದನ್ವಯುವು.

186. ಕಡುಗಲಿ=ಮಹಾಶೂರ. ಎಡೆಯೆನಿಸಿದರೆಡೆಯೊಳ್ = ವಾಸಸ್ಥಾನವೆನ್ನಿಸಿಕೊಂಡವರಲ್ಲಿ.

187. ಅಗ್ಗಲಿಕುಂ = ಹೆಚ್ಚುವುದು. ಕನಲ್ಕೆ = ಕೋಪ. ಬೆನ್ನೀರ್ = ಬೆಚ್ಚನೆ + ನೀರ್ = ಬಿಸಿಯನೀರು. ಘೋಂಕಲ್ = ಬೇಗನೆ.

188. ಸೊಲ್ಲಿಪ = ಹೇಳುವ. ಕಿನಿಸು = ಕೋಪ. ಎಂತೋ = ಯಾವರೀತಿಯಾದುದೋ, ಯಾವಬಗೆಯದೋ.

189. ನೃಪುಂಗವರ್ಗ್ಗ = ಮನುಷ್ಯಶ್ರೇಷ್ಠರಿಗೆ ಒರೆಗಂ ದೊರೆಗಂ = ಸರಿಸಮಾನಕ್ಕೆ.

190. ಅಱೆವುದಂ = ಅರಿಯುತಕ್ಕುದನ್ನು. ಅಱಕೆ = ಧರ್ಮಕ್ಕೆ. ಎಱೆವಟ್ಟು = ಆಶ್ರಯ.

191. ಮಾಂಕರಿಪರೊಳ್ = ಅಪಮಾನಪಡಿಸುವವರಲ್ಲಿ.

192. ಅನ್ಯಂ ಸೈರಿಸುಗೆ, ಕಳೆಯುಂ ಕಳೆಗೆ, ಎಂದನ್ವಯುವು. ಸೈರಿಸುಗೆ = ಸಹಿಸಲಿ, ಕಳೆಗೆ =ಬಿಡಲಿ.

193. ಚಾಗಿ—ತ್ಯಾಗಿ (ಸ್ಕಂ).

194. ಕಡುಬಡವರ್ ಬೇಡಲೊಡಂ—ಎಂದನ್ವಯುವು. ನೀಡಿಲ್ಲದೆ = ನಾವಕಾಶಮಾಡದೆ. ಕೋಡು = ದಾನ. ಕುಡು ಎಂಬ ಧಾತುವಿನಿಂದ ಬಂದುದು. ಉದಾಹರಣಾಂತರ—ತೋಡು (ತುಡು), ಬೀಡು (ಬಿಡು), ಪಸು (ಇಸು), ಸೂಡು (ಸುಡು), ಇತ್ಯಾದಿ. ಕಡಂ = ಸಾಲ.

195. ನಿಕ್ಕುವಂ = ನಿಜವಾಗಿ. ಆತ್ಮೀಯ......ಯುಂ= ತಮ್ಮ ತಮ್ಮ ಗುಣಗಳಲ್ಲಿ ವ್ಯತ್ಯಾಸ. ಕಟು = ಕಹಿ. ಬಿಡುಗಣ್ಣರ್ಗ್ಗಂ = ದೇವತೆಗಳಿಗೂ (ಅನಿಮಿಷರು).

196. ಸಾಜಂ—ಸಹಜಂ (ಸ್ಕೃ). ಸೊಲ್ಲಿಸಿ = ಹೇಳಿ. ಮಿಗಿಲ್ = ಹೆಚ್ಚು.

197. ತೊಳಪ್ಪ = ತೊಳಗುವ, ಹೊಳೆವ. ಪೊಗ್ಗರದಂತಿರೆ = ಗುಂಪಿನಹಾಗೆ. ಆೞ್ದಂದು = ಮುಳುಗುವಾಗ. ಆಳ್ =(ಕ್ರಿ) ಅಧಿಕಾರವಮಾಡು. ಆಳ್ (ನಾ) = ಸೇವಕ. ನಂಟರವು = ನಂಟರಾಗಿದ್ದೇವೆ. 176 ಪ. ಟಿ. ನೋಡಿ.

198. ಪುರು......ದೊಳ್ = ಪುರುಷಾರ್ಥಗಳ ಮೊದಲು ಮೂರರಲ್ಲಿ—ಎಂದರೆ ಧರ್ಮ, ಅರ್ಥ, ಕಾಮ, ಇವುಗಳಲ್ಲಿ. ದೊರೆಕೊಳೆ = ಸಿಕ್ಕಲು. ನಡುವಣದು = ಅರ್ಥ. ಕೆಲದೊಳಿರ್ಪುವಂ= ಪಕ್ಕಗಳಲ್ಲಿರುವುವನ್ನು—ಎಂದರೆ ಧರ್ಮ, ಕಾಮ, ಇವನ್ನು. ಅದಂ = ಅರ್ಥವನ್ನು. ಎಡೆ = ಸ್ಥಾನ, ಗುರಿ, (ಆಗುತ್ತೀಯೆ).

199. ತುಱು = ಹಸು. ಕಿವಿದೊಡವು = ಕರ್ಣಾಭರಣ.

200. ಅನ......ದ್ಯರ್ = ನಿರ್ದುಷ್ಟವಾದ ವಿದ್ಯೆಯುಳ್ಳವರು. ಅಡೆ = ಅಡಿಗಮಾಡಲು. ಕಯ್ಪೆಸೊರೆ = ಕಹಿಸೋರೆ. ಇನಿಸಾನುಂ = ಸ್ವಲ್ಪವಾದರೂ.

201 ಪ್ರೋತ್ರಂ = ನೇಗಿಲ ಮುಖ, ಗುಳ. ಅಂತದಿರ್ಕೆ = ಅದು ಹಾಗಿರಲಿ.

202 ಜವಂ ಉಱ್ಮುಂದು—ಎಂದನ್ವಯವು.

203. ಅವಱ = ಅವುಗಳ. ಅವಾಪ್ಯವಸ್ತು = ಹೊಂದತಕ್ಕ ವಸ್ತು, ದೇವರು.

204. ಬೆಳ್ವಕ್ಕದ = ಶುಕ್ಲಪಕ್ಷದ ಬಿಳಿದು + ಪಕ್ಕ. ಪರಿಪಿಡಿಯಿಂ = ಕ್ರಮದಿಂದ ಅೞ್ಗುಂ = ಅದೃಶ್ಯವಾಗುವುದು. ಅರೆ (ಕ್ರಿ) = ಗುಂಡಿನಿಂದ ಅರೆ. ಅಱೆ (ನಾ) = ಕಲ್ಲು. ಅರೆ (ನಾ) = ಅರ್ಧ. ಬಿದುಪ್ಪೋಲ್ = ಚಂದ್ರನಹಾಗೆ. ವಿಧು (ಸ್ಕೃ).

206. ಉಡೆಸೊಬಗುಂ = ವಸ್ತ್ರದ ಚೆಲುವು. ತುಡಿಗೆಯ = ಆಭರಣದ. ಅಪಥದೊಳ್ = ದುರ್ಮಾರ್ಗದಲ್ಲಿ. ಒಳ್ವಿಜ್ಜೆಸೊಬಗೆ = ಸದ್ವಿದ್ಯೆಯ ಚೆಲುವೇ.

207. ಇಡಿದ = ತುಂಬಿದ. ಅಜೆಯುಮ—30 ಪ. ಟಿ. ನೋಡಿ. ಪಡಲ್ವಡಿಪ = ನಾಶಮಾಡುವ.

208. ಇರಣದೊಳ್ = ಸವುಳುಭೂಮಿಯಲ್ಲಿ. ನೆಲ್ಲಂ ವರಮನಿಕುಂ—ಎಂದನ್ವಯವು.

209. ಕೋಳ್ವೋಗದು = ಕೊಳ್ಳೆಹೋಗುವುದಿಲ್ಲ. ಬೆಸಗೊಳ್ವಂಗೆ = ಕೇಳುವವನಿಗೆ. ಬೆಸಗೊಳ್ವಂಗೆ ಇತ್ತೊಡೆ ಕುಂದದು—ಎಂದನ್ವಯವು. ಬಸಮಲ್ತು = ಸಾಧ್ಯವಲ್ಲ. ಬಿಜ್ಜೆಸಿರಿಯೆಸಾಗ.. ವಿದ್ಯಾಶ್ರೀಯನ್ನು ಕೂಡಲಿ.

210. ಆರಯಿ = ಆಲೋಚಿಸಲು. ಆರಯ್ಯೆ ಎಂದೂ ಉಂಟು. ನೆಱೆವರ್ = ಸಮರ್ಥರಾಗುವರು. ನೀರಕ್ಷೀರನ್ಯಾಯದೆ = ನೀರೂ ಹಾಲೂ ಬೆರಸಿದ್ದರೆ ಹಂಸವು ಹಾಲನ್ನು ಮಾತ್ರ ಪ್ರತ್ಯೇಕಿಸಿ ಕುಡಿವ ರೀತಿಯಲ್ಲಿ. ಕಲ್ವುದು = ಕಲಿಯಬೇಕು.

211. ಓಡಂನಡೆಯಿಪನ = ದೋಣಿಯನ್ನು ನಡೆಯಿಸುವವನ. ನೆರಪಿಂದೆ = ಸಹಾಯದಿಂದ. ಪೀಡು—ಸ್ಥಾನ.

212. ಪ್ರತಿಭಾ......ದಂ = ವಿಶೇಷವಾದ ಬುದ್ಧಿಚಾತುರ್ಯದಿಂದ. ಶತ... ..ಸಂ = ಸ್ವರ್ಗವಾಸವು. ಕಾಣ್ಬಂ = ನೋಡುವ.

213. ಮೊದಲಿಂ = ಬೇರಿಂದ. ನಲವು = ಸಂತೋಷವು. ಬರೆವರೆ = ಬರುತ್ತ ಬರುತ್ತ. ಸಪೆಗುಂ = ಕುಂದುವುದು.

214. ಕಮ್ಮಿತು = ವಾಸನೆಯುಳ್ಳುದು. ಕಲ್ಲದರ್—ಹೊ. ಗ. ಕಲಿಯದವರು. ಇರ್ಪಿನಂ = ಇರಲು.

215. ಅಭಿಜಾತರಲ್ಲಿ = ಸತ್ಕುಲಪ್ರಸೂತರಲ್ಲಿ. ಅವಂದಿರೊಳ್ = ಖಲರಲ್ಲಿ.

216. ಪದುಳಂಬೆಸಗೊಳ್ವುದುಂ = ಕ್ಷೇಮವನ್ನು ವಿಚಾರಿಸುವುದೂ.

217. ವೈಪರೀತ್ಯಂ = ವ್ಯತ್ಯಾಸ. ಕರುಣಾ... ..ಭಿಗಳ್ = ದಯಾಳುವಾದವರು. ಗುಣಗರ್ಗೆ = ಮಹಾತ್ಮರಿಗೆ. ಪೊಗ್ಗೇ = ಸಾಧ್ಯವೇ ?

218. ಅಧಮರ್ ಗೆಯ್ವರ್—ಎಂದನ್ವಯವು. ಎರಳೆಗೆ = ಹುಲ್ಲೆಗೆ. ಪಲ್ಲಣಂ = ಜೇನು, ಕೋಗೀರು. ಪೋಣರ್ವ = ಯುದ್ಧಮಾಡುವ.

219. ಸಸಿಗೆ = ಚಂದ್ರನಿಗೆ. ಶಶಿ (ಸ್ಕ್ರ). ಮಸಗುವ = ಪ್ರಬಲವಾದ. ಕಱಯುಂ ಸ್ಯೆರಿಸದೆ—ಎಂದನ್ವಯವು. ಕಱ. 2. ಪ. ಟಿ. ನೋಡಿ. ತವರೆ = ಸಾಯರೇ ? ಧಾ. ತವು.

220. (ಅವರ್) ಇಲ್ಲನೆ. ಉರ್ಚಿದ = ಭೇದಿಸಿದ. ಹರಿಯುಂ = ಸಿಂಹವನ್ನು. ಕೋಲ್ = ಬಾಣ.

221. ಅಕ್ಕರಗುರುಡರ = ಅಜ್ಞಾರ, ಓದದವರ. ಅಸಂ......ವುಂ = ಹೊಂದಿಕೆಯಿಲ್ಲದ ಮಾತನ್ನು. ಅಱಲ್ದುಂ = ಸಂಕಟಪಟ್ಟುಕೊಂಡೂ.

222. ಜಡಿದು = ನಿಂದಿಸಿ. ಉಡಿದು = ಒಡೆದು. ಮಧು......ಮಂ = ಅತ್ಯಂತಮಧುರವಾದ ರಸವನ್ನು.

223. ತಳ್ಳಂಕಂಗೊಳ್ವ = ತಲ್ಲಣಿಸುವ.

224. ಪರ .....ದೊಳ್ = ಹೆರವರ ರಹಸ್ಯಗಳನ್ನು ಕೇಳುವುದರಲ್ಲಿ. ಏಡರ್ = ಕಿವುಡರು.

225. ಪದುಳಮಂ ಕೇಳ್ದು = ಕುಶಲಪ್ರಶ್ನೆಮಾಡಿ, ಕ್ಷೇಮವನ್ನು ವಿಚಾರಿಸಿ.

226. ಇಹಕಂ=ಇಹಕ್ಕೂ. ಪರತ್ರಗಂ=ಪರಕ್ಕೂ.

227. ಪೊನ್ನುಂ ದೊರಕೊಳಿಸದ=ಹೊನ್ನು ಕೊಟ್ಟರೂ ಸಿಕ್ಕದ.

228. ಪಿರಿಯುರವು—176, 197 ಪ. ಟಿ. ನೋಡಿ. ಅ ಱಿಯುಮುಯುಂ—30 ಪ. ಟಿ. ನೋಡಿ.

229. ಮುಂಬಗಲ = ಪೂರ್ವಾಹ್ಣದ. ದುಱುದುಂಬಿಗ ಳೊಳ್=ಮಷ್ಟ್ವರಲ್ಲಿ. ಪಿಂಬಗಲ=ಅಪರಾಹ್ಣದ. ಅಳುಂಬಂ= ಹೆಚ್ಚಾಗಿ.

230. ಪೆರ್ಮೆ = ಶ್ರೇಷ್ಠತೆ. ಕಲಾಪರಿಣತರ್ = ವಿ ದ್ವಾಂಸರು.

232. ಅಳುರೆ=ವ್ಯಾಪಿಸಲು. ದುರ್ಗುಣಂ ಆರ್ತ್ಯಸವಾಗ ಮಿದಿಂದಂ ಅಱಿಗುಂ— ಎಂದನ್ವಯವು.

233. ಪೊಚ್ಚದ = ನವಿಯ. ಪೊನಲೊಡನೆ = ನೀರೊ ಡನೆ.

234. ಅಱಿಯಿಂ—ವಿಧಿರೂಪದ ಮಧ್ಯಮಪುರುಷ ಬಹುವ ಚನವು. ಇಂ—ಪ್ರತ್ಯಯ. ಇಱಿಯಿಂ = ನಾಶವಾಡಿರಿ. ಎಱ ಗಿಂ = ನಮಸ್ಕರಿಸಿರಿ. ಉಱಿಯಿಂ = ಬಿಡಿರಿ.

235. ಉಮ್ಮಳಮುಂ= ಸಂತಾಪವನ್ನು. ಅಳವಡುವೊಡೆ = ಉಂಟಾಗುವುದಾದರೆ. ಇಂಥವರಲ್ಲಿ ಸ್ನೇಹವುಂಟಾಗುವು ದಾದರೆ ಜನನವು ದುಃಖಕರವಲ್ಲ.

236. ಕುತ್ತಮುಂ = ವ್ಯಾಧಿಯೂ. ಬೆಚ್ಚಪ್ಪೊಲ್ = ಬೆಸೆದಹಾಗೆ, ಬಿಡದೆ ಸೇರಿಕೊಂಡು. ಧಾ. ಬಿಸು.

237. ಸೊದೆಯಿಂ = ಅಮೃತದಿಂದ. ಸುಧಾ (ಸ್ಕ್ರ). ಬಾಸಣಿಸಿದ = ತೊಡೆದ, ಬಳಿದ. ಅಮರ್ದುಗದಿರನೊಳ್ = ಅಮೃತಕಿರಣನಲ್ಲಿ, ಚಂದ್ರನಲ್ಲಿ. ಕತದಿಂ = ಕಾರಣದಿಂದ.

ಕಂದುಂ = ಕಳಂಕವ್ರೊ. ಅರ್ಥಾಂತರ—ಬಾಳೆಯು ಕಂದು. ಕಂದು (ಕ್ರಿ)= ಕಳೆಗುಂದು. ಕೇವಳಮೇ=ಸಾಮಾನ್ಯವೇ ?

238. ಕೀರದೊಳ್—ಕ್ಷೀರ (ಸ್ತ್ರ್ಯ). ನೇರಿದರ = ಸಜ್ಜನರ. ಗೆಯ್ದು, ಗೆಯ್ಯ್, ಎರಡು ರೂಪಗಳೂ ಉಂಟು. ನೇರಿದುವು—ನೇರಿತು ಎಂಬುದರ ಬಹುವಚನವು.

239. ಸತ್‌ಕ್ಷೇತ್ರದೊಳ್ = ಒಳ್ಳೆಯ ಭೂಮಿಯಲ್ಲಿ. ಇತರರ =ದುರ್ಜನರ. ಪ್ರತೀಪವಾತದ = ಇದಿರುಗಾಳಿಯಿಂದ. ಪಡಂಗುವ್ರೋಲ್ = ಹೊ. ಗ. ಹಡಗು.

240. ಅತ್ಯಲ್ಪಂ = ಬಹಳ ಹೆಚ್ಚು.

241. ಕಟ್ಟಲ್ಕೆಂದೆ—ಕಡಿದು + ಅಲ್ಕ ಹ್.

242. ಕೊಂಡೆಯುದಿಂದಂ = ಚಾಡಿಯಿಂದ. ಅಂಡಲೆದು = ಕೆಡಿಸಿ. ಬಸಮಪ್ಪರೆ = ವಶವಾಗುವರೇ ?

243. ಕೆಯ್ಯ್ = ಗದ್ದೆಯು. ಬಾಳ್ವಂ = ಬಾಳುವವನು. ಬಾಳ್ (ನಾ)— ಬಾಳಿಕೆ. ಬಾಳ್ (ನಾ)= ಕತ್ತಿ.

244. ಸಂದ ಅಭಿಜನದೊಳ್ = ಪ್ರಸಿದ್ಧವಾದ ಕುಲದಲ್ಲಿ. ಕ್ರಿಯೆಯಿನೆ = ಮಾಡುವ ಕೆಲಸದಿಂದಲೇ.

245. ನಿಱಿಸಲಾರ್ಪರೇ = ನೆಲೆಗೊಳಿಸಬಲ್ಲರೇ ? ಒಳ್ಜಸಮುಂ—ಒಳ್ಳಿತು + ಜಸಂ.

246. ನಾಣಂ = ನಾಚಿಕೆಯನ್ನು. ಇದು ಕಾಮಿತಮುಂ ಕಱೆಗುಂ ಎಂದಱಿದು—ಎಂದನ್ವಯವು. ಮಾಣರ್ = ಬಿಡರು.

247. ನಿಸದಂ = ನಿಜ. ಬಿನ್ನನೆ = ಕೆಲಸಮಾಡದೆ, ಸುಮ್ಮನೆ.

248. ಗದಲ್—ಹೊ. ಗ. ಗದ್ದಲು. ಗದಲ್ ಬೇರಂ ತಿನೆ —ಎಂದನ್ವಯವು.

249. ಬಱಿದೆ = ವ್ಯರ್ಥವಾಗಿ. ಅನವದ್ಯಕುಲಂ = ಸತ್ಕುಲ. ಕಲ್ಪಿ = ವಿದ್ಯೆ—ಕಲ್ + ಪಿ.

250. ಬಸವೞಿದವರ್ಗ್ಗೆ = ಬಳಲಿದವರಿಗೆ.

252. ಆಶ್ರಿತಾ......ಮೆ=ಆಶ್ರಿತರನ್ನು ಕಾಪಾಡುವುದೇ. ಭರಣಂ =ಆಭರಣ.

253. ಸ್ವೀಯರ್ = ತಮ್ಮವರು. ಪರಕೀಯರ್ = ಹೆರವರು. ಸಖಾಯರ್ =ಸ್ನೇಹಿತರು. ಜ್ಯಾಯರ್= ದೊಡ್ಡವರು. ಕನೀಯರ್ = ಚಿಕ್ಕವರು.

254. ಕುಡಿತೆಯೊಳ್ = 'ಕುಂಚಿತಾಂಗುಲಿಗಳನುಳ್ಳ ಅಂಗೈ' ಯಲ್ಲಿ. ಕದನ್ನದಂತಿರೆ = ಕೆಟ್ಟ ಅನ್ನದಹಾಗೆ. ಮಿಸುನಿಯ = ಚಿನ್ನದ. ಬೋನಂ = ಅನ್ನ.

255. ಸರಿವರ್ = ಬಿಟ್ಟುಹೋಗುವವರು.

256. ತಳರದೆ = ಹಿಂಜರಿಯದೆ.

257. ಒಮ್ಮೆಯೆ = ಒಂದೇಸಾರಿ.

258. ಮರವೂವಂತಿರೆ=ಮರದಲ್ಲಿ ಬಿಡುವ ಹೂವಿನಹಾಗೆ. ಸೌಹೃದಂ = ಸ್ನೇಹ. ನೀರ್ವೂವೋಲ್=ನೀರಿನಲ್ಲಿ ಬೆಳೆವ ಗಿಡದ ಹೂವಿನಹಾಗೆ.

259. ಚೂತಂ=ಮಾವಿನಮರವು.

260. ಹರ್ಮ್ಯ ದೊಳ್ = ಉಪ್ಪರಿಗೆಯಲ್ಲಿ. ಓಗರಂ = ಅನ್ನವು. ಪರ್ಣಾಗಾರದ = ಗುಡಿಸಲಿನಲ್ಲಿ.

261. ನಂಟರೆವು—176 ಪ. ಟಿ. ನೋಡಿ. ಪೂಣುತೆ= ಪ್ರತಿಜ್ಞೆಮಾಡುತ್ತ.

262. ಕರಿಯನ್ನರ=ಆನೆಯಂತಹ ಮನುಷ್ಯರ.

263. ಕೆಯ್ವೆಳೆಯಿಪ=ಗದ್ದೆಯನ್ನು ಬೆಳೆಯಿಸುವ.

264. ಪನೆಗ=ಪನೆಯೆಂಬ ಮರಕ್ಕೆ. ಅರ್ಥಾಂತರ— ಹಲ್ಲು. 27 ಪ. ಟಿ. ನೋಡಿ. ತೊಣೆ = ಸಮಾನ. ಸೋಲ್ಚ್ಪೆನಂ=ಆಲೋಚಿಸಲು. ಕೌಂಗಿಂಗೆ = ಅಡಕೆಯ ಮರಕ್ಕೆ. ಪಾಸಟಿ=ಸಮಾನ. ವ್ಯವಸಾಯವಿಲ್ಲದೆ ಪನೆ ಫಲಕೊಡುತ್ತದೆ; ತೆಂಗಿಗೆ ಸ್ವಲ್ಪಕಾಲದವರೆಗೆ ವ್ಯವಸಾಯಮಾಡಬೇಕು; ಅಡಕೆಗೆ ಯಾವಾಗಲೂ ವ್ಯವಸಾಯಮಾಡುತ್ತಲೇ ಇರಬೇಕು.

265. ಅಗುಣಂ=ದೋಷವು. ಪೋಲ ಎಸಱ್—ಸಂಧಿ ಇಲ್ಲ. ಶ. ಮ. ದ. ಸೂತ್ರ 58. ಸೊರೆ ನೀರ್ಗೆ (ಉಂಟು), ತುಷಂ ಕಳಮಕೆ (ಉಂಟು).

266. ಅನ್ಯಥಾಗುಣರ್=ವ್ಯತ್ಯಾಸವಾದ ಗುಣವುಳ್ಳವರು ಕರಿಮುರಿವೋಕುಂ=ಬೆಂದು ತಪಿಸುವುದು.

267. ಪತ್ತುವಿಡಲಾಗದರ್=ಬಿಟ್ಟುಕೀರದವರು. ಅತ್ತಳಗಂ = ಹೆಚ್ಚಾಗಿ. ಆರ್ ಸೈರಿಸರ್?—ಎಂದನ್ವಯವು. ತತ್ತಱದಱಿವರೆ = ಕತ್ತರಿಸಿ ಹಾಕುವರೇ ?

269. ಸರಸ.... .ತರ=ರಸಭರಿತವಾದ ವಿದ್ಯೆಗಳಲ್ಲಿ ಪಾರಂಗತರಾದವರ. ಸರಸ......ಸದಿಂ = ರಸಯುಕ್ತವಾದ ಮಾತಿನ ಚೆಲುವಿನಿಂದ. ವಿರಸ.. ...ದಿಂ = ಒಣಹರಟೆಯಿಂದ.

271. ಮಗಮಗಿಪ=ಸುವಾಸನೆಯುಳ್ಳ. ಆಟಿಸುವರ್= ಅಪೇಕ್ಷಿಸುವವರು.

272. ಅದವಱಲ್=ದುಃಖ. ಗಯ್ಯವೇಡಿದುದಂ=ಮಾಡತಕ್ಕುದನ್ನು. ಪೂಣ್ಬ = ನಿಶ್ಚಯಿಸುವ.

273. ಅಳವಟೆದ = ನಿತ್ರಾಣವಾದ. ಅಳವಂ = ಪರಾಕ್ರಮವನ್ನು. ಮುಂದುವರಿಯರ್ = ಮುಂದಾಗಿ ನಿಲ್ಲರು. ಎಳವಱೆಯಂ = ಬಾಲಚಂದ್ರನನ್ನು.

274. ಆದೊಡಂ—ಹೊ. ಗ. ಆದರೂ. ತುಡವೇಳ್ಕುಂ= ಧರಿಸಬೇಕು.

275. ಜಡಭಾವಮಂ = ಸೋಮಾರಿತನವನ್ನು.

276. ಒಜೆತಪುದು = ಸ್ರವಿಸುತ್ತದೆ. ಒಸರ್ದಪ್ಪುದು= ಸ್ರವಿಸುತ್ತದ. ಗನಹರ್ = ಮಹಾತ್ಮರು.

277. ಕೆನ್ನಂ=ವಿಶೇಷವಾಗಿ. ನೋಲ್ಪನ್ನಂ = ಆಲೋಚಿಸಲು.

278. ಈಸುವ—ಹೊ. ಗ. ಈಜುವ. ವಿದಗ್ಧರ್= ಪಂಡಿತರು. ನುಡಿವೆಣ್ = ಸರಸ್ವತಿ. ಕಡಲಣುಗಿ=ಸಮುದ್ರ ಪುತ್ರಿ, ಲಕ್ಷ್ಮಿ.

279. ಅಸಂ......ಕರ್ = ಹೊಂದಿಕೆಯಿಲ್ಲದೆ ಹರಟುವವರು. ತತಿವೋಲ್=ಸಮೂಹದಹಾಗೆ. ಪಚ್ಚೆಲೆ—ಪಚ್ಚೆ+ ಎಲೆ. ತುಱುಗಲ್ = ಸಮೂಹ.

280. ಕಿಜೆಯಂದು=ಚಿಕ್ಕವನಾಗಿದ್ದಾಗ, ಬಾಲ್ಯದಲ್ಲಿ.

281. ಕಲ್ಲದೆ—ಹೊ. ಗ. ಕಲಿಯದೆ.

282. ತಜೆಯಂ= ದಸಿಯನ್ನು. ಬೆಟ್ಟಲೊಡಂ—ಹೊ. ಗ. ಪೆಟ್ಟಲು.

283. ವಚಂ = ಮಾತು. ಇಟ್ಟೈಸಿಗೊಳ್ಗುಂ = ಆಕರ್ಷಿಸುವುದು. ಇನಿವಂಡು—ಇನಿದು + ಒಂಡು. ಬಂಡು =ಮಕರಂದ. ಪುರೀಪಕೆ = ಮಲಕ್ಕೆ.

284. ಇಂಗಾಲಮಂ = ಇದ್ದಲನ್ನು. ಆದಪ್ಪುದೆ=ಆಗುತ್ತದೆಯೇ?

285. ಕ್ಷುಲ್ಲಕರ್ = ಅಲ್ಪರು, ನೀಚರು. ಈವಂದು = ದಾನಮಾಡುವಾಗ. ಇರ್ಪಿನಂ = ಇರಲು.

286. ಕಡವರಂ=ಹೊನ್ನು, ಧನ. ಕಿಜೆದು=ಕೊಯ್ದು. ತಿರಿ (ಕ್ರಿ) = ಸುತ್ತು. ಸೂಡಲ್ = ಮುಡಿಯಲು.

287. ಕೋಡು—194 ಪ. ಟಿ. ನೋಡಿ. ಆರಯ್ಯಲೊಡಂ = ಆಲೋಚಿಸಲು.

288. ಬೀಡಂ = ತಮ್ಮ ಸ್ಥಳವನ್ನು. ಊಳ್ದು =ಕೂಗಿಕೊಂಡು, ಬಡಿದುಕೊಂಡು. ಬಾಯ್ಬಿಟ್ಟು=ದೈನ್ಯದಿಂದ. ಕೋಡದೆ = ಹಿಂಜರಿಯದೆ. ಅರ್ಥಾಂತರ—ಕೋಡು = ಕೃತ್ಯೇ. ಕೋಡು(ನಾ)=ಕೊಂಬು, ಕೊಂಬೆ ; ದಾನ. ತಣಿಯೆ=ತೃಪ್ತಿಯಾಗುವಹಾಗೆ.

289. ಪೇರ್ಪೈಸಿರಿ—ಪಿರಿದು + ಐಸಿರಿ. ಅಱಸು = ಹುಡುಕು. ಅರಸು (ನಾ) = ದೊರೆ.

290. ಎನತು—ಹೊ. ಗ. ನನ್ನದು. ಎನ್ಗೆ—ಹೊ. ಗ. ಎನ್ನಲಿ. ಆನುಮಂತೆ = ನಾನೂ ಹಾಗೆಯೇ—ಎಂದರೆ ಅನುಭವಿಸುವುದಿಲ್ಲ, ಕೊಡುವುದಿಲ್ಲ. ನೆಲಕಲಂ ಪಣಂ ಎನತು ಎನ್ಗೆ—ಎಂದನ್ವಯವು.

292. ಇಱಿವಂದೆ......ಪೋಲ್ = ಚೆನ್ನಾಗಿ ಹೊಡೆದಾಗ ಮಾತ್ರ ಕರೆಯಗೊಡುವ ತುಂಟುಹಸುವಿನಹಾಗೆ. ತಳ್ತು = ಬಲವಾಗಿ.

293. ತನತಾಗೆ=ಹಣವು ತನ್ನದಾಗಿರಲು. ಮುನಿಯಂ = ಕೋಪಿಸನು.

294. ಉಱದೆ = ಹೆದರದೆ. ಬೆಂಗೊಳ್ವ = ಓಡಿಸುವ ಆರ್ಪುಂ =ಪರಾಕ್ರಮವೂ. ಕಡುಗೂರಿತ್ತು = ಬಹಳ ಸೂಕ್ಷ್ಮ. ಕಡು + ಕೂರಿತ್ತು. ಕುಡುವಿಲ್ಲನ = ಕೊಂಕಾದ ಬಿಲ್ಲುಳ್ಳವನ, ಮನ್ಮಥನ. ಇಟೆಪ = ತಗ್ಗಿಸುವ.

295. ಅಱಿಯಾ = ಹೊ. ಗ. ಅರಿಯೆಯಾ ?

296. ಬೇಳ್ಪರ್ಗ್ಗೆ = ಬೇಡುವವರಿಗೆ. ಬೇಳ್ (ಕ್ರಿ) = ಹೋಮಮಾಡು. ಬೇಳ್ವರ್ = ಹೋಮಮಾಡುವವರು. ನೆರಂಬ

ಡೆಯಲ್ = ಸಹಾಯುವನ್ನು ಪಡೆಯಲು. ನೆರಂ, ನೆರವು, ಎಂಬ 2 ರೂಪಗಳೂ ಉಂಟು. ಇಲ್ಲೆಂಬೊಡೆ = ಇಲ್ಲ ಎನ್ನಬೇಕಾದರೆ.

297. ಅದು = ಮರಗೋಡು. ಆಡುಂಬೊಲನಾದರ = ವಿಹಾರ ಸ್ಥಾನವಾದವರ. 52 ಪ. ಟಿ. ನೋಡಿ

298. ಇಟೆದು =ಕೃಶವಾಗಿ. ಎಲ್ಲಾದೊಡಂ = ಎಲು ಬಾದರೂ.

299. ಒಡವರ್ಪ = ಸೇರಿಬರುವ. ಅಟೆಗಜ್ಜಮಂ = ಕೆಟ್ಟಕೆಲಸವನ್ನು. ಅಟೆವು = ಸಾವು.

300. ಬರ್ದುಂಕೆ = ಬಾಳೇ. ಯಾಚ್ಞೆಯುಂ = ಯಾಚ ನೆಯನ್ನು, ಬೇಡುವುದನ್ನು.

301. ಗೆಲ್ಲಂಗೊಳಲ್ = ಜಯಿಸಲು. ಬಲ್ಲರ್......ದಿಟ ದಿಂ = ತಿಳಿದವರು ಮಾತನಾಡಿದರೆ ಮನುಜಮೃಗಗಳು ಅವರ ಹಲ್ಲನ್ನು ಮುರಿದು ಕೈಯಲ್ಲಿ ಕೊಡುವರು. ದಿಟದಿಂ=ನಿಜವಾಗಿ.

303. ಪುರುಳಂ = ಅರ್ಥವನ್ನು, ವಿಷಯವನ್ನು. ಓವರಿ ಯೊಳ್ = ಕೋಣೆಯಲ್ಲಿ. ಅವಱೊಳ್ = ಅವುಗಳಲ್ಲಿ—ಪುಸ್ತಕ ಗಳಲ್ಲಿ.

304. ಅವಧರಿಸಂ = ಕೇಳನು. ಚಮುಗಂ = ಸವುಟು.

306. ಎವೆಯಿಕ್ಕುವಸಿತಱೊಳ್ = ರಪ್ಪೆ ಮುಚ್ಚುವಷ್ಟ ರಲ್ಲಿ. ಅಂಗಮಂ=ದೇಹವನ್ನು. ಪೊಂದಿದೊಡೇಂ=ಸತ್ತರೇನು?

308. ಎಡರಡಸಿದಂದು = ಸಂಕಟ ಬಂದಾಗ. ಎತ್ತ ಣದು= ಎಲ್ಲಿಯದು?

309. ಎಳೆಯರೆವು = ಚಿಕ್ಕವರಾಗಿದ್ದೇವೆ. 176 ಪ. ಟಿ. ನೋಡಿ. (ಅಱನಂ) ಕಡೆಗಣಿಸಿ. ಕಟ್ಟಿಗೂಟಂ = ಬುತ್ತಿ ಯನ್ನು. ತಳದಿಂ = ಕೈಯಿಂದ. ಬೆಳವಲ್ = ಬೇಲದಹಣ್ಣು. ಧರ್ಮವೆಂಬ ಬುತ್ತಿಯನ್ನು ಸಿದ್ಧಮಾಡಿಕೊಳ್ಳದವರು ಮರಣವನ್ನು

ಹೊಂದುವಾಗ ಬಾಯಿ ಹೋಗಿ ತಾವು ಇಟ್ಟಿರುವ ಗಂಟನ್ನು ತೋರಿಸುವುದಕ್ಕಾಗಿ ಕೈಯಿಂದ ಸನ್ನೆಮಾಡಲು ಬಂಧುಗಳು ಬೇಲದಹಣ್ಣಿನ ಪಾನಕವನ್ನು ಕೇಳುತ್ತಾರೆ ಎಂದು ತಿಳಿವರು.

310. ಬಱಿದೆ = ನಿಷ್ಕಾರಣವಾಗಿ. ಕೇಳ್ದಾತಂ = ಬಯ್ಯಲ್ಪಟ್ಟವನು. ಉಸಿಕನೆ = ಮೌನವಾಗಿ.

311. ಸಂಸಾರಜಾಲದೊಳ್ = ಸಂಸಾರವೆಂಬ ಬಲೆಯಲ್ಲಿ. ಅಡಲ್ ಸವನಿಸಿ = ಅಡಿಗವಾಡಲು ತವಕಿಸಿ, ಅವೆ = ಆಮೆ. ನಲಿವರಿವ = ಸಂತೋಷದಿಂದ ಹರಿದಾಡುವ.

312. ಬಲ್ದೆರೆಯು = ದೊಡ್ಡ ಅಲೆಯು. ಉಲಿ = ಶಬ್ದ.

314. ಕುಲೀನತೆಯುಂ = ಒಳ್ಳೆಯ ಮನೆತನದಲ್ಲಿ ಹುಟ್ಟಿರುವಿಕೆಯನ್ನು. ಬಹು......ತೆಯುಂ = ಅನೇಕವಿದ್ಯೆಗಳಲ್ಲಿ ಚತುರತೆಯನ್ನು. ಆದಂ = ಹೆಚ್ಚಾಗಿ. ಮನ್ನಣೆ = ಮರ್ಯಾದೆ. ಕೃತ್ಯಂ = ಹುಚ್ಚು.

315. ಬೇಸಱದೆ = ಬೇಸರಪಡದೆ. ಧಾ. ಬೇಸಱು. ಭೂತಸ್ನ್ಯೂನ—ಬೇಸತ್ತು. ಹೀಗೆಯೇ ಆಸಱು, ಆಸತ್ತು; ಇತ್ಯಾದಿ.

316. ಈಹಿತಮಂ = ಅಭೀಷ್ಟವನ್ನು. ಬೆಟ್ಟನೆ = ಕ್ರೂರವಾಗಿ. ಅಡರುತೆ = ವ್ಯಾಪಿಸುತ್ತ. ತೀ = ಕ್ರೀಟಿ, ತಿಮಿರು.

317. ಪಾಟಿ = ಕ್ರಮವು. ಪಾಳಿ = ಸಮೂಹ.

318. ತಿಳಿಯಲ್ವೇಡಿದ = ಹೊ. ಗ. ತಿಳಿಯಬೇಕಾದ. ಬೆಸಗೊಳ್ವಂ = ಕೇಳುವ. ವಿಧಿರೂಪದ ಉತ್ತಮಪುರುಷಬಹುವಚನವು—ಅಂ ಪ್ರತ್ಯಯವು. 212 ಪ. ಟಿ. ನೋಡಿ—ಕಾಣ್ಬಂ.

319. ಅಣುವನಿತಾದೊಡಂ = ರವೆಯಷ್ಟಾದರೂ.

320. ನಡಪೆಯುಂ = ಸಾಕಿದರೂ. ಎಮೆಯಿಕ್ಕದೆ = ರೆಪ್ಪೆಹಾಕದೆ. ಅಸವಸದಿಂ = ಆತುರದಿಂದ.

321. ಕಡುಗಲ್ಲೆರ್ದೆಯಂ = ಬಹಳ ಕಠಿನವಾದ ಮನಸ್ಸು ಳ್ಳವನು. ಮನಮೊಲ್ವಂ = ಸಂತೋಷಿಸುವನು. ಕಾಟ್ಗೆಡೆವಂ = ನಿಂದಿಸುವನು. ಇವನೊಳಾಂತು = ಇವನಿಗೆ ಪ್ರತಿಭಟಿಸಿ ನಿಂತು. ಆರುಮಂ ಕಡೆಗಣಿಪಂ, ಆರುಮಂ ಕಾಟ್ಗೆಡೆವಂ—ಎಂದನ್ವಯವು.

322. ರತ್ನ......ಡೇಂ = ರತ್ನಗಳ ಕಾಂತಿಯಿಂದ ದೀಪ ಹಚ್ಚಿದಂತೆ ಆಗಿದ್ದರೇನು ? ಬಗೆವುಗೆ = ಮನೋಹರಳಾಗಿ.

323. ಸೊಡರ್ಗುಡಿಯುಂ = ದೀಪದ ಶಿಖೆಯೂ. ಪಡಿ = ಸಮಾನ.

324. ಧನದಂಗಂ = ಕುಬೇರನಿಗೂ.

325. ಕಡವರದಿಂ = ಚಿನ್ನದಿಂದ. ಸಮೆದೊಡಂ = ಮಾಡಲ್ಪಟ್ಟಿದ್ದರೂ. ಕರ್ಪಂ = ಕೆರವನ್ನು, ಎಕ್ಕಡವನ್ನು.

---

326. ಏಗಳ್ = ಯಾವಾಗ. ಗೆಯ್ಯಲ್ವೇಡಿದುವು = ಮಾಡಬೇಕಾದುವ್ರೋ. ಆಗುಳಿಸುತೆ—ಹೊ. ಗ. ಆಕಳಿಸುತ್ತ.

327. ಕೊಱಂತೆ = ಹೊ. ಗ. ಕೊರತೆ. ಪೊಲನಾಗದು = ಗೋಚರವಾಗದು. ಗುಣಮೆನಿತಿರ್ದುದರ್ಕಂ (ಪೊಲನಾಗದು).

328. ಸಮನಿಸದೆ = ಉಂಟಾಗದೆ. ಪುರಸ್ಕಾರಂ = ಮರ್ಯಾದೆ.

329. ಪಿಂಗದೆ = ಹಿಂದೆಗೆಯದೆ. ಅದಟಂ = ಪರಾಕ್ರಮವನ್ನು. ಅದಟು—ಪ್ರಥಮೆ. ಅದಟಂ = ಪರಾಕ್ರಮಶಾಲಿ—ಪ್ರಥಮೆ. ಬಿದುವಂ = ಕುಂಭಸ್ಥಳವನ್ನು. ಅರ್ಥಾಂತರ—ಬಿದು = ಚಂದ್ರ (ವಿಧು).

330. ಏಡಿಸದೆ=ಪರಿಹಾಸಮಾಡದೆ.

331. ಆಸತ್ತು=ಶ್ರಮಪಟ್ಟು. 27, 315, ಪ. ಟಿ. ನೋಡಿ. ಚಿಂತಾ......ಗೆ = ಚಿಂತೆಗೆ ನೆಲೆಯಾಗಲು.

332. ಎಂದಾನುಂ—ಹೊ. ಗ. ಎಂದಾದರೂ. ಎಲ್ಲಿಯಾನುಂ—ಹೊ. ಗ. ಎಲ್ಲಿಯಾದರೂ. ಅಂತು=ಹಾಗೆ.

333. ಪೂಜಾಸ್ಥಾನಂ=ಗೌರವಿಸುವುದಕ್ಕೆ ಯೋಗ್ಯವಾದುದು. ಫಣಿವೈರಿಗೆ=ಗರುಡನಿಗೆ. ವಾಯಸಂ=ಕಾಗೆ.

334. ಒಸೆಯದೊಡೆ=ಪ್ರೀತಿಸದೆ ಹೋದರೆ. ಕೊಂಡು ಕೊನೆಯರೆ=ಪ್ರೀತಿಯಿಂದ ಮನ್ನಿಸರೇ? ಬಂಡುಣಿ=ದುಂಬಿ. ಬಂಡು + ಉಣಿ.

335. ನೆಲಕಲಂ=ಲೋಭಿ.

336. ಪರೀಮಳಮಂ=ವಾಸನೆಯನ್ನು.

337. ಅನುರೂಪರೊಳ್=ತಕ್ಕವರಲ್ಲಿ. ನೆರಂ, ನೆರವು, ಎಂಬ 2 ರೂಪಗಳೂ ಉಂಟು. ನೆಱಂ=ಮರ್ಮಸ್ಥಾನ. ಘನದಿಂ=ಮೇಘದಿಂದ. ಚಾದಗೆ—ಚಾತಕ (ಸ್ತ್ರೀ).

338. ಋಣಶೇಷಮಂ, ರೋಗಶೇಷಮಂ, ಶತ್ರುಶೇಷಮಂ—ಎಂದು ಅನ್ವಯಿಸಿಕೊಳ್ಳುವುದು. ಗಣನಾತೀತಂ=ಲೆಕ್ಕವನ್ನು ಮೀರಿದುದು. ಸಂಕಟಜಾತಂ=ಸಂಕಟಗಳ ಸಮೂಹ.

340. ಅಳಱಿಸುತೆ=ಹೆದರಿಸುತ್ತ. ಅಂಡಲೆಯಲ್=ಪೀಡಿಸಲು. ಪಂದೆ = ಹೇಡಿ. ಮಾರ್ಮಲೆಯಲ್=ಯುದ್ಧಮಾಡಲು.

341. ತಳ್ತ = ವ್ಯಾಪಿಸಿದ. ದಂಡಕಂ= ಕೋಲಿಗೂ. ದೀವಿಗೆ—ದೀಪಿಕಾ (ಸ್ತ್ರೀ). ದಂಡಕಂ ದೀವಿಗೆಗಂ ಸರಿಯೆನಿಕುಂ—ಎಂದನ್ವಯವು.

343. ಒಳಗಣ್=ಒಳಗಣ ಕಣ್ಣು. ಆನನದೊಳ್=ಮುಖದಲ್ಲಿ.

344. "ಕ್ಷಣಶಃ ಕಣಶಶ್ಚೈವ। ವಿದ್ಯಾಮರ್ಥಂ ಚ ಸಾಧಯೇತ್॥"—ಎಂಬುದು ಹಿರಿಯರ ವಚನವು. ಇದರರ್ಥ:—ಪ್ರತಿಕ್ಷಣವೂ ಸ್ವಲ್ಪಸ್ವಲ್ಪವಾದರೂ ಹಣವನ್ನೂ ವಿದ್ಯೆಯನ್ನೂ ಸಂ

ಗ್ರಹಿಸಬೇಕು. ಇದು ವಾಕ್ಯವೇಷ್ಟನಕ್ಕೆ ಉದಾಹರಣವಾಗಬಹುದು. ಶ. ಮ. ದ. 61 ನೆಯ ಸೂತ್ರವನ್ನು ನೋಡಿ.

345. ಆನಿಸ=ಕೊಡಲು. ಪೆಱರ್ ಆನಿಸೆ—ಎಂದನ್ವಯವು. ಉಂತೆ=ಸುಮ್ಮನೆ, ಕಷ್ಟಪಡದೆ. ಅನರ್ಘ್ಯ.. ರ್ಘ್ಯಂ=ಹೆಚ್ಚು ಬೆಲೆಯುಳ್ಳ ವಸ್ತು.

346. ಓವದೆ=ಪ್ರೀತಿಸದೆ, ಗ್ರಹಿಸದೆ. ಧಾ. ಓ=ಸ್ನೇಹೇ.

349. ಮುಕುರಮಂ=ಕನ್ನಡಿಯನ್ನು.

350. ಅಂತ......ವ=ಮಧ್ಯದಲ್ಲಿರುವ ಸೊಸ್ನೆಯೇ. ಅವಱೊಳ್=ಅವುಗಳಲ್ಲಿ. ಎಲ್ಲಂಗಡೊಳಂ = ಎಲ್ಲಾ ಅವಯವಗಳಲ್ಲಿಯೂ.

351. ಬಹಳ......ತಂ = ಅನೇಕಶಾಸ್ತ್ರಗಳಲ್ಲಿ ಪಂಡಿತನು. ಎನೆ=ಎಂದು ಹೇಳಲು. ಜನಜಾತಂ=ಜನರ ಸಮೂಹವು. ಜಾತಂಗೆ=ಮಗನಿಗೆ. ತಾತಂ=ತಂದೆ. ಆತಂ (ತಂದೆ). ಏಪಿರಿದು = ಏಂ + ಪಿರಿದು = ಏನು ದೊಡ್ಡದು ? ಜನಜಾತಂ ಎನೆ—ಎಂದನ್ವಯವು.

352 ಜವರದೊಳಂ=ಯುದ್ಧದಲ್ಲಿಯೂ. ವಯಸ್ಯ......ಳಂ=ಸ್ನೇಹಿತರ ಗುಂಪಿನಲ್ಲಿಯೂ. ಅಭ್ಯವಹಾರದೊಳಂ = ಊಟದಲ್ಲಿಯೂ.

353. ಇದು ಪೊಲ್ಲದು ಇದು ಒಳ್ಳಿತು ಎಂಬ—ಎಂದನ್ವಯವು. ಒಗ್ಗಿನೊಳ್ = ಗುಂಪಿನಲ್ಲಿ. ವಿವೇಕಮಂ ಸೊಲ್ಲಿಸಿ—ಎಂದನ್ವಯವು.

354. ಪ್ರಾಜ್ಞರ್=ತಿಳಿದವರು. ಬ್ರಹ್ಮಜ್ಞರ್=ಪರಬ್ರಹ್ಮವನ್ನು ತಿಳಿದವರು. ಎಂಬರ್=ಎಂದು ಹೇಳುವವರು. ಬೀಗುವರೇ=ಗರ್ವಪಡುವರೇ ?

355. ವ್ಯಯದಿಂ=ವೆಚ್ಚ ಮಾಡುವುದರಿಂದ. ತಸ್ಕರಭಯಕೆ=ಕಳ್ಳರ ಭಯಕ್ಕೆ.

356. ತನು.....ದೊಳ್=ಮೈಯೆಂಬ ಹುತ್ತಿನಲ್ಲಿ. ರಸನೋರಗಂ=ನಾಲಗೆಯೆಂಬ ಹಾವು. ನಿಷ್ಠು..... ಳಮಂ=ಕ್ರೂರವಾದ ಮಾತೆಂಬ ವಿಷವನ್ನು. ಅನುಪಮ.....ಜಂ=ಅಸದೃಶವಾದ ಸ್ಮರಣೆಯೆಂಬ ವಿಷವೈದ್ಯನು. ಅಱಿಪಲ್—ಹೊ. ಗ. ಅರುಹಲು. ಎೞ್ಚಱವೇೞ್ಕುಂ—ಹೊ. ಗ. ಎಚ್ಚರವಾಗಿರಬೇಕು. ಧಾ. ಎೞ್ಚಱು. ಭೂತಸ್ಯೂನ—ಎೞ್ಚತ್ತು. 315 ಪ. ಟಿ. ನೋಡಿ. ಆದರೆ—ಅೞ್ಕಱು, ಅೞ್ಕರ್ತು. ಈ ಧಾತು ಹೊಸಗನ್ನಡದಲ್ಲಿಲ್ಲ. ಅೞ್ಕಱು (ನಾ) ಹೊ. ಗ. ಅಕ್ಕರೆ. ಈ ಪದ್ಯದಲ್ಲಿ ರೂಪಕಾಲಂಕಾರ.

357. ಅನಪತ್ಯತೆ=ಮಕ್ಕಳಿಲ್ಲದಿರುವಿಕೆ. ತನುಜಾತರ್=ಮಕ್ಕಳು.

358. ಕಿತ್ತಡಿ=ಮುನಿ. 7 ಪ. ಟಿ. ನೋಡಿ. ಅನುವರದೊಳ್ = ಯುದ್ಧದಲ್ಲಿ.

359. ಕೂರ್ಪಿಂದೆ=ಬುದ್ಧಿಸೂಕ್ಷ್ಮತೆಯಿಂದ. ತೋರ್ಪ=ದೃಷ್ಟಿಗೋಚರವಾಗುವ. ಎಣೆವಪ್ಪುದು=ಸಮಾನವಾಗುವುದು. ಅಮೇಯಂ = ಅಳತೆಯನ್ನು ಮೀರಿದುದು.

360. ಎಡರ್ಗಳ = ವಿಘ್ನಗಳ.

361. ಭೋಗಿಶಯನಂಗೆ = ಹಾವೇ ಹಾಸಿಗೆಯಾಗಿ ಉಳ್ಳ ವಿಷ್ಣುವಿಗೆ, ವಾಮನನಿಗೆ. ಕವಿ = ಶುಕ್ರಾಚಾರ್ಯರು.

362. ಕೊಳುಗುಳದೊಳ್ = ಯುದ್ಧದಲ್ಲಿ. ಅದಟರ = ವೀರರ. ತಳವೆಳಗಂ= ಆಶ್ಚರ್ಯವನ್ನು. ಅಗ್ಗಳಂ=ಹೆಚ್ಚು. ಒಳಪಗೆಗಳೊಳ್= ಅರಿಷಡ್ವರ್ಗದೊಡನೆ—ಎಂದರೆ, ಕಾಮಕ್ರೋಧಾದಿಗಳೊಡನೆ. ಅಳವೞಿಯದೆ=ಬಲಗುಂದದೆ. ತಗುಳ್ದು=ತಾಗಿ.

ಗೆಲ್ಲಂಗೊಂಡಂ = ಜಯಿಸಿದವನು. ಗೆಲ್ಲಂಗೊಂಡಂ ಕಲಿಗೆ ಅಗ್ಗಳಂ ಎನಿಸುಗುಂ—ಎಂದನ್ವಯವು.

363. ಕಸಕಿಲವೃಷ್ಟಿಲ್ = ಪೊರಕೆಯಹಾಗೆ. ಕಸವರಮಂ = ಧನವನ್ನು. ಕಸಮೆಂಬಿನಂ = ಕಸವೃಷ್ಟಿ ಎಂಬಂತೆ.

364 ಕಱೆ = ಕಳಂಕ, ದೋಷ ಪಿಱೆಯಂ= ಚಂದ್ರನನ್ನು. 133 ಪ. ಟಿ. ನೋಡಿ. ಬಾಂದೊಱೆದಲೆಯನುಂ=ಗಂಗೆಯನ್ನು ತಲೆಯಲ್ಲಿ ಉಳ್ಳವನೂ, ಈಶ್ವರನೂ. ಬಾಂದೊಱೆ=ಆಕಾಶನದಿ, ಗಂಗೆ.

365. ಅಭ್ಯುದಯಕಾಲದೊಳ್= ಐಶ್ವರ್ಯವಿರುವಾಗ. ಪಲಂಬರ್—ಪಲಬರ್, ಪಲರ್, ಎಂದೂ ಉಂಟು. ಒಡನಾಡಿಯ=ಸ್ನೇಹಿತನ.

366. ಪಂಕಿಲಂ = ಕೆಸರುಳ್ಳುದು ಸೂರನ= ಸೂರ್ಯನ. ಕಡುಗಾಯ್ಪಿನಿಂದ = ಹೆಚ್ಚಾದ ತಾಪದಿಂದ—ಕಡಿದು + ಕಾಯ್ಪು. ಅರ್ಥಾಂತರ—ಕಾಯ್ಪು = ಕೋಪ. ಕಿಱುವೆಂಚೆ—33 ಪ. ಟಿ. ನೋಡಿ.

367. ಕಾಲುರಿಚಂ = ಮೂಢನು. 89 ಪ. ಟಿ. ನೋಡಿ. ದರ್ದುರಂ = ಕಪ್ಪೆ. ಮಾಧುರಿಯಂ=ರುಚಿಯನ್ನು.

368. ಸಾರೆವಂದು = ಸಮೀಪಕ್ಕೆ ಬಂದು. ಅಮಳರ್ ದೂರದೊಳಿರ್ದೊಡಂ—ಎಂದನ್ವಯವು.

369. ನನ್ನಿಯಂ=ಸತ್ಯವನ್ನು. ಉಡಿ = ಅಡಗಿಸು. ಸಯ್ಪಂ=ಸನ್ಮಾರ್ಗವನ್ನು, ಪುಣ್ಯವನ್ನು. ಪಡಲ್ವಡಿಸು=ಬೀಳಿಸು, ನಾಶಮಾಡು. ಕಱಂಬಂ=ಹೊಟ್ಟೆಗಿಚ್ಚನ್ನು. ಕಡಂಗಿ = ಉತ್ಸಾಹದಿಂದ. ಉಕ್ಕೆವಮಂ=ವಂಚನೆಯನ್ನು, ಮೋಸವನ್ನು.

370. ಉಜ್ಜುಗಂ—ಉದ್ಯೋಗ (ಸ್ಕ್ಯ). ಪಿತ್ತೆ=ವ್ಯರ್ಥ—ವೃಥಾ (ಸ್ಕ್ರ). ಇಂಗಾಲಮಂ=ಇದ್ದಿಲನ್ನು. ಇಂಗಡಲ್—1 ಪ. ಟಿ. ನೋಡಿ. ಕರ್ಚೆ = ತೊಳೆಯಲು.

**371.** ಕಳಕಂಠಂ = ಕೋಗಿಲೆ. ಕೊತ್ತಳಿಯು = ಕಾಗೆಗಳ ಗುಂಪಿನ.

**372.** ತರಣಿಯುತ್ತಣಿಂ = ಸೂರ್ಯನಿಗಿಂತ. ಬಹಿಸ್ತಮಮಂ=ಹೊರಗಣ ಕತ್ತಲೆಯನ್ನು. ಹೃದಯ......ಮಂ = ಹೃದಯವೆಂಬ ಪೊಟ್ಟರೆಯೊಳಗಿರುವ ಕತ್ತಲೆಯನ್ನು.

373. ಸುರಸಂ = ಮಧುರ. 'ಭೋಜನಸ್ವಾದರೋರಸಃ' ಎಂಬುದು ಸಂಸ್ಕೃತ ಶ್ಲೋಕದ ಪಾದವು. ಇದೂ ವಾಕ್ಯವೇಷ್ಟನಕ್ಕೆ ಉದಾಹರಣವಾಗಬಹುದು. 344 ಪ. ಟಿ. ನೋಡಿ ಉಣಿಸು ಸುರಸಂ ಆದೊಡೇಂ—ಎಂದನ್ವಯವು.

374. ಸಂಜಾತಂ=ಹುಟ್ಟಿದವನು. ಅಲ್ಲಂ = ಸತ್ಕುಲದೊಳ್ ಸಂಜಾತನಲ್ಲಂ. ಓರಂತೆ = ಕ್ರಮವಾಗಿ. ಚಾರಿತ್ರ್ಯಮು = ನಡತೆಯೇ. ಪಿಸುಣಾಡಿದಪ್ಪುದು = ಚಾಡಿ ಹೇಳುತ್ತದ, ಸೂಚಿಸುತ್ತದೆ. ಮಾತೇಂ = ಕೆಟ್ಟದ ಮಾತಿನಿಂದೇನು ?

375. ಇಲ್ಲಿ ಸಜ್ಜನನನ್ನು ಊರ್ಣನಾಭಿಗೆ ಎಂದರೆ ಜೇಡನಿಗೆ ಹೋಲಿಸಿದೆ. ಗುಣ ಎಂದರೆ ನೂಲು ಎಂದು ಮತ್ತೊಂದರ್ಥ. ಛಿದ್ರ = (1) ದೋಷ, (2) ರಂಧ್ರ. ಜಾಲ = (1) ಸಮೂಹ, (2) ಬಲೆ. ಶ್ಲೇಷಾಲಂಕಾರ.

